ಕನ್ನಡನಾಡಿನಲ್ಲೆಲ್ಲಾ ಸಾವಿರಾರು ಭಾಷಣಗಳನ್ನು ಮಾಡಿದ್ದರೂ ಒಂದು ಕಡೆಯೂ ತಮ್ಮ ಹಿರಿಮೆಯನ್ನೂ, ತಮ್ಮ ಮನೆಯ ವಿಷಯಗಳನ್ನೂ ಪ್ರಚಾರಮಾಡಲಿಲ್ಲ. ಹೀಗಾಗಿ ಅವರ ಬದುಕಿನ ಅನೇಕ ವೃತ್ತಾಂತಗಳು ಕನ್ನಡಿಗರಿಗೆಲ್ಲಾ ಗೊತ್ತಾಗುವುದು ಸಾಧ್ಯವಾಗಲಿಲ್ಲ. ಸಿ.ಕೆ. ವೆಂಕಟರಾಮಯ್ಯನವರ ಜೊತೆಗೆ ಓದಿದ್ದವರು, ಅವರ ಜೊತೆಯಲ್ಲಿ ಕೆಲಸಮಾಡುತ್ತಿದ್ದವರು ಮತ್ತು ಅವರ ಮನೆಯವರು ಮೊದಲಾದವರು ಹೇಳಿದ, ನೆನಪಿನಲ್ಲಿಟ್ಟುಕೊಂಡಿದ್ದ ವಿಷಯಗಳನ್ನು ಸಂಗ್ರಹಿಸಿದ್ದರಿಂದ ಅವರ ಈ ಜೀವನ ಚರಿತ್ರೆಯನ್ನು ಬರೆಯಲು ಸಾಧ್ಯವಾಯಿತು. ತಾವು ಬದುಕಿದ್ದಾಗ ಅವರು ತಮ್ಮ ಜೀವನ ಚರಿತ್ರೆಯನ್ನು ಯಾರು ಎಷ್ಟು ಬಲವಂತಪಡಿಸಿದರೂ ಬರೆಯಲಿಲ್ಲ. ಆತ್ಮೀಯರಾಗಿದ್ದ ಮಿತ್ರರು ಕೆಲವರು ಬರೆಯಬೇಕೆಂದುಕೊಂಡಾಗ ವಿಶೇಷ ಉತ್ಸಾಹವನ್ನೂ ತೋರಿಸಲಿಲ್ಲ.

೧೮೯೬ನೆಯ ವರ್ಷದ ಡಿಸೆಂಬರ್ ಹತ್ತನೆಯ ತಾರೀಖು, ಬೆಂಗಳೂರು ಜಿಲ್ಲೆಯ ಚನ್ನಪಟ್ಟಣಕ್ಕೆ ಸೇರಿದ ಪೊಟ್ಟು ಎಂಬ ಗ್ರಾಮದಲ್ಲಿ ಸಿ.ಕೆ. ವೆಂಕಟರಾಮಯ್ಯನವರು ಹುಟ್ಟಿದರು. ಹಿರಿಯರು ಮಾಡುತ್ತಿದ್ದ ವೃತ್ತಿ ಶಾನುಭೋಗತನ ಶಾನುಭೋಗರು ಗ್ರಾಮಗಳಲ್ಲಿ ಲೆಕ್ಕಪತ್ರ ಬರೆಯುವವರು. ಇವರ ತಾಯಿಯ ಹೆಸರು ನಂಜಮ್ಮ. ತಂದೆಯವರ ಹೆಸರು ಕೃಷ್ಣಪ್ಪ. ಅವರು ಸರ್ಕಾರದ ಕೆಲಸದಲ್ಲಿದ್ದು ಷೇಕದಾರರಾಗಿದ್ದರು. ಇವರು ಹೊಯ್ಸಳ ಕರ್ನಾಟಕ ಬ್ರಾಹ್ಮಣರು.

ಪೊಟ್ಟುವಿನಲ್ಲೇ ಹಿರಿಯರ ಮನೆ, ಅಲ್ಪಸ್ವಲ್ಪ ನೆಲ ಇತ್ತು. ಆದರೆ ತಂದೆ ಷೇಕದಾರರು ಸರ್ಕಾರದ ಉದ್ಯೋಗದಲ್ಲಿದ್ದುದರಿಂದ ಅವರಿಗೆ ಆಗಾಗ ಬೇರೆ ಬೇರೆ ಊರುಗಳಿಗೆ

ವರ್ಗವಾಗುತ್ತಿತ್ತು. ಸರ್ಕಾರದಲ್ಲಿ ತುಂಬಾ ಜವಾಬ್ದಾರಿಯ ಕೆಲಸವಾದರೂ ತಿಂಗಳಿಗೆ ಏಳೋ, ಎಂಟೋ ರೂಪಾಯಿ ಸಂಬಳ ಆಗಿನ ಕಾಲದಲ್ಲಿ. ಆದ್ದರಿಂದ ಬಡತನದಲ್ಲಿಯೇ ಅವರ ಸಂಸಾರ ಸಾಗಿತ್ತು.

ಪೊಟ್ಟು ಗ್ರಾಮದ ಎಲ್ಲ ಮಕ್ಕಳೂ ಮಾಡುತ್ತಿದ್ದಂತೆ ವೆಂಕಟರಾಮಯ್ಯನವರೂ ಓದು ಬರಹ ಕಲಿಯುವ ವಯಸ್ಸಾದ ಕೂಡಲೇ ಗ್ರಾಮದ ಕೂಲೀಮಠವನ್ನು ಸೇರಿದರು. ಸುಮಾರು ಆರು ತಿಂಗಳು ಇಲ್ಲಿ ಅ, ಆ, ಇ, ಈ ತಿದ್ದು ಹಾಕಿದರು. (ಇಲ್ಲಿ, ಇವರ ಜೊತೆಗೆ ವಿ. ವೆಂಕಟಪ್ಪನವರೂ ಓದುತ್ತಿದ್ದರು. ವಿ. ವೆಂಕಟಪ್ಪನವರು ದೊಡ್ಡವರಾದ ಮೇಲೆ ಮೈಸೂರು ರಾಜ್ಯದ ಮಂತ್ರಿ ಆದರು.) ಆಮೇಲೆ ಆರುತಿಂಗಳಾದ ಕೂಡಲೇ ವೆಂಕಟರಾಮಯ್ಯನವರು ತಂದೆ ತಾಯಿಗಳ ಹತ್ತಿರ ಹೋಗಿ ಸೇರಿಕೊಂಡರು. ಸೋಲೂರು, ಕುದೂರು, ಮಾಗಡಿ ಎಂದು ಬೇರೆ ಬೇರೆ ಊರುಗಳಿಗೆ ಷೇಕದಾರರಿಗೆ ವರ್ಗವಾಗುತ್ತಿತ್ತು. ಹೀಗೆ ತಂದೆಗೆ ವರ್ಗವಾಗುತ್ತಿದ್ದ ಊರುಗಳಲ್ಲಿ ಇವರು ಪ್ರೈಮರಿ ವಿದ್ಯಾಭ್ಯಾಸವನ್ನು ಮಾಡಿದರು.

ಮುಂದೆ ತಾತನ ಮನೆಯಿದ್ದ ಪೊಟ್ಟುವಿಗೆ ಬಂದು ಸೇರಿಕೊಂಡರು. ದೊಡ್ಡ ಮನೆ. ದೊಡ್ಡ ಕುಟುಂಬ. ಇವರ ನಡುವೆ ಬಾಲಕ ವೆಂಕಟರಾಮಯ್ಯನವರು ಬೆಳೆದರು. ಪೊಟ್ಟುವಿನಲ್ಲಿ ವಿದ್ಯಾಭ್ಯಾಸಕ್ಕೆ ಅನುಕೂಲವಿರಲಿಲ್ಲ. ಆದ್ದರಿಂದ ಇಲ್ಲಿನ ಹುಡುಗರು ಮಿಡ್ಲ್ ಮತ್ತು ಹೈಸ್ಕೂಲಿಗೆ ಚನ್ನಪಟ್ಟಣಕ್ಕೆ ಹೋಗಬೇಕಾಗುತ್ತಿತ್ತು. ವೆಂಕಟರಾಮಯ್ಯನವರು ಚನ್ನಪಟ್ಟಣದಲ್ಲಿ ಮಿಡ್ಲ್ ಸ್ಕೂಲಿಗೆ ಸೇರಿದರು. ಪ್ರತಿದಿವಸವೂ ಪೊಟ್ಟುವಿನಿಂದ ನಡೆದುಕೊಂಡು

ಚನ್ನಪಟ್ಟಣದ ಸ್ಕೂಲಿಗೆ ಬರಬೇಕು. ಹೀಗೆ ಓದಿ ಮಿಡ್ಲ್ ಸ್ಕೂಲು ಮುಗಿಸಿ ಹೈಸ್ಕೂಲಿಗೆ ಕಾಲಿಟ್ಟರು. ಸಂಸ್ಕೃತವನ್ನೇ ಮುಖ್ಯಭಾಷೆಯನ್ನಾಗಿ ಓದುತ್ತಿದ್ದರು. ಕನ್ನಡವೆಂದರೆ ಅವರಿಗೆ ಇಷ್ಟವಿರಲಿಲ್ಲವೆಂತಲ್ಲ. ಸಂಸ್ಕೃತವೆಂದರೆ ಅವರಿಗೆ ತುಂಬಾ ಮೆಚ್ಚುಗೆಯಾಗಿತ್ತು.ಸಂಸ್ಕೃತದಲ್ಲಿ ಜಾಣ ವಿದ್ಯಾರ್ಥಿ ಯೆಂದು ಹೆಸರು ಪಡೆದುಕೊಂಡರು. ಜೊತೆಗೆ ಶಾಲೆ ಬಿಟ್ಟ ಕೂಡಲೇ ಸೋದರಮಾವನವರ ಮನೆಸೇರುತ್ತಿದ್ದರು. ಅಲ್ಲಿ ದೊಡ್ಡ ಸಂಸ್ಕೃತ ಪಂಡಿತರಾಗಿದ್ದ ಸೋದರಮಾವ ನವರಿಂದ ಪುನಃ ಇವರಿಗೆ ಸಂಸ್ಕೃತ ಪಾಠವಾಗುತ್ತಿತ್ತು. ಆ ಹಿರಿಯರು ತುಂಬಾ ಪ್ರೀತಿಯಿಂದ ಈ ಹುಡುಗನಿಗೆ ವೇದಾಭ್ಯಾಸ ಮಾಡಿಸಿದರು. ಸಂಸ್ಕೃತದಲ್ಲಿ ವೆಂಕಟ ರಾಮಯ್ಯನವರು ತುಂಬಾ ಬುದ್ಧಿವಂತರಾಗುವಂತೆ ಸಂತೋಷದಿಂದ ಪಾಠ ಹೇಳಿಕೊಟ್ಟರು. ಅದಕ್ಕೆ ತಕ್ಕಂತೆ ವೆಂಕಟರಾಮಯ್ಯನವರು ಸಂಸ್ಕೃತವನ್ನು ಮನಸ್ಸಿಟ್ಟು ಚೆನ್ನಾಗಿ ಕಲಿತುಕೊಂಡರು.

ಇಲ್ಲಿಯವರೆಗೆ ಎಲ್ಲವೂ ಚೆನ್ನಾಗಿ ನಡೆಯುತ್ತಿತ್ತು. ಬಹಳ ದಿವಸಗಳಿಂದ ಎಲ್ಲರೂ ಬಯಸಿದಂತೆ ತಂದೆ ಷೇಕ ದಾರರಿಗೆ ಚನ್ನಪಟ್ಟಣಕ್ಕೆ ವರ್ಗವಾಯಿತು. ಎಲ್ಲರಿಗೂ ತುಂಬಾ ಸಂತೋಷ. ಬೇರೆ ಬೇರೆ ಊರುಗಳಲ್ಲಿ ಕಷ್ಟಪಡು ತ್ತಿದ್ದವರಿಗೆ ಸ್ವಂತ ಊರಿಗೇ ವರ್ಗವಾದಾಗ, ಈ ಸಂಸಾರ ಒಂದು ಘಟ್ಟಕ್ಕೆ ಬಂದಿತೆಂದು ಎಲ್ಲರಿಗೂ ಅನ್ನಿಸಿತು. ಆದರೆ ಆದದ್ದೇ ಬೇರೆ. ನಾವಂದುಕೊಳ್ಳುವುದೊಂದು, ದೈವ ನಡೆ ಸುವುದೊಂದು ಎಂಬುದೊಂದು ಗಾದೆಯಿದೆ. ಇದೇ ರೀತಿಯೇ ಆಯಿತು. ಇದ್ದಕ್ಕಿದ್ದಹಾಗೆಯೇ ಷೇಕದಾರರು

ಅಕಾಲಮರಣಕ್ಕೆ ತುತ್ತಾದರು. ಸುಖವಾಗಿದ್ದೇವೆ ಅಂದು ಕೊಂಡ ಕಡೆ ಇದಕ್ಕಿಂತಾ ಕಷ್ಟ ಬೇಕೇ?

ತಂದೆಯವರು ತೀರಿಕೊಂಡಾಗ ವೆಂಕಟರಾಮಯ್ಯ ನವರಿಗೆ ಹನ್ನೆರಡು ವರ್ಷ ವಯಸ್ಸು. ಹೈಸ್ಕೂಲು ಓದು ಇನ್ನೂ ಪೂರೈಸಿರಲಿಲ್ಲ. ಮನೆಯಲ್ಲಿ ತಾಯಿ, ಅಣ್ಣ, ತಮ್ಮ ಮತ್ತು ತಂಗಿ ಇಷ್ಟು ಜನರ ಸಂಸಾರ ನಡೆಯಬೇಕಾ ಗಿತ್ತು. ಮಕ್ಕಳನ್ನು ಮುಂದೆ ಓದಿಸುವುದಕ್ಕೆ ತಾಯಿಗೆ ಯಾವ ಅನುಕೂಲವೂ ಇರಲಿಲ್ಲ. ಆದರೂ ಕಷ್ಟಪಟ್ಟು ಅವರು ಮಕ್ಕಳನ್ನು ಓದಿಸಿದರು.

ವೆಂಕಟರಾಮಯ್ಯನವರು ಎಸ್ಸೆಸ್ಸೆಲ್ಸಿಗೆ ಬಂದಾಗ ಅಲ್ಲಿ ಕನ್ನಡ ಪಂಡಿತರಾಗಿದ್ದ ಹನುಮಂತರಾವ್ ಎಂಬುವವರು, ಕನ್ನಡದಲ್ಲಿ ಶಿಷ್ಯನಿಗೆ ಬಹಳ ಜಾಣತನವಿರುವುದನ್ನು ತಿಳಿದು ಕೊಂಡರು. ಅವರು ವೆಂಕಟರಾಮಯ್ಯನವರನ್ನು ತುಂಬಾ ವಿಶ್ವಾಸದಿಂದ ಕಂಡು, ಸಂಸ್ಕೃತದ ಬದಲು ಕನ್ನಡವನ್ನು ಓದುವಂತೆ ಪ್ರೋತ್ಸಾಹಿಸಿದರು. ಗುರುಗಳು ಹೇಳಿದಂತೆ ವೆಂಕಟರಾಮಯ್ಯನವರು ಎಸ್ಸೆಸ್ಸೆಲ್ಸಿ ಪಬ್ಲಿಕ್ ಪರೀಕ್ಷೆಗೆ ಕನ್ನಡ ತೆಗೆದುಕೊಂಡು ಉತ್ತರ ಬರೆದು ತೇರ್ಗಡೆ ಯಾದರು.

ಆವತ್ತಿನಿಂದ ಕನ್ನಡ ಅವರ ಉಸಿರಾಯಿತು. ಜೀವ ವಾಯಿತು. ಹನುಮಂತರಾಯರು ಮಾಡಿದ ಈ ಕೆಲಸ ದಿಂದ ಕನ್ನಡಕ್ಕಾಗಿಯೇ ತನು, ಮನ, ಧನಗಳನ್ನು ಅರ್ಪಿಸಬಲ್ಲ ವ್ಯಕ್ತಿ ಕನ್ನಡನಾಡಿಗೆ ದೊರಕಿದರು.

ಎಸ್ಸೆಸ್ಸೆಲ್ಸಿ ಮುಗಿಯಿತು. ಮುಂದೆ ಏನು ಮಾಡ ಬೇಕು? ವೆಂಕಟರಾಮಯ್ಯನವರಿಗೇನೋ ಕನ್ನಡ ಬಿ. ಎ. ಓದಬೇಕೆಂಬ ಆಸೆ. ಆದರೆ ಸಂಸಾರದ ಕಷ್ಟ ತಾಯಿಗೆ

ಗೊತ್ತು. ಮುಂದೆ ಓದಬೇಕಾದರೆ ಬೆಂಗಳೂರಿನಲ್ಲಿ ಇದ್ದು ಕೊಂಡು ಓದಬೇಕು. ಬೆಂಗಳೂರಿನಲ್ಲಿ ಇರಲಿಕ್ಕೆ, ಕಾಲೇಜು ಫೀಜಿಗೆ, ಊಟ ತಿಂಡಿಗೆಲ್ಲಾ ತುಂಬಾ ಖರ್ಚಾಗುತ್ತದೆ. ಇದಕ್ಕೆಲ್ಲಾ ಹಣವನ್ನು ಎಲ್ಲಿಂದ ಒದಗಿಸುವುದು? ತಾಯಿಗೆ ಮಗ ಅಂಗಡಿಯೊಂದನ್ನು ಇಟ್ಟುಕೊಂಡು ವ್ಯಾಪಾರ ಮಾಡಿ, ಮನೆಗೆ ಸಹಾಯ ಮಾಡಲಿ ಎಂಬ ಯೋಚನೆ ಯಿತ್ತು. ಈ ರೀತಿ ವ್ಯಾಪಾರ–ಗೀಪಾರ ಮಾಡುವುದು ವೆಂಕಟರಾಮಯ್ಯನವರಿಗೆ ಇಷ್ಟವಿರಲಿಲ್ಲ. ಹಣ ಸಂಪಾದನೆ ಮಾಡುವ ಕಡೆ ಅವರಿಗೆ ಯೋಚನೆಯೇ ಇರಲಿಲ್ಲ. ಓದ ಬೇಕು, ತುಂಬಾ ಓದಬೇಕು, ಜ್ಞಾನಾರ್ಜನೆ ಮಾಡಿಕೊಳ್ಳ ಬೇಕು ಎಂಬ ಆತುರ ಅವರಿಗೆ. ಸ್ವತಂತ್ರವಾಗಿ ಬೆಂಗಳೂ ರಿಗೆ ಹೋಗಿದ್ದು, ತಮ್ಮ ಖರ್ಚಿಗೆ ತಾವೇ ದುಡಿದು ಕೊಳ್ಳುವುದಾಗಿ ಅವರು ತಾಯಿಗೆ ಹೇಳಿ, ತನ್ನ ವಿಷಯ ವಾಗಿ ಚಿಂತಿಸಬಾರದೆಂದು ಸಮಾಧಾನ ಹೇಳಿದರು. ತಾಯಿಗೆ ಮಗನ ಮನಸ್ಸು ಅರ್ಥವಾಯಿತು. ಮಗನ ಯೋಚನೆಗೆ ಅವರು ಒಪ್ಪಿದರು; ಹಿರಿಯ ಮಗನಿಗೆ ಆಗಲೇ ಕೆಲಸ ವಾಗಿದ್ದರಿಂದ ಉಳಿದಿಬ್ಬರು ಮಕ್ಕಳೊಂದಿಗೆ ಆತನ ಮನೆ ಯಲ್ಲಿ ಉಳಿದುಕೊಳ್ಳಲು ನಿರ್ಧರಿಸಿದರು.

## ಬೆಂಗಳೂರಿಗೆ ಪ್ರಯಾಣ

ಸಿ. ಕೆ. ವೆಂಕಟರಾಮಯ್ಯನವರ ಆನಂದಕ್ಕೆ ಪಾರವೇ ಇಲ್ಲ. ತಮ್ಮ ಆಸೆ, ತಾವು ಕಂಡ ಕನಸು ಎಲ್ಲವೂ ಪೂರೈಸು ತ್ತದೆ ಎಂದು ಅನಿಸಿದಾಗ ಅವರಿಗೆ ನೆಮ್ಮದಿಯೆನಿಸಿತ್ತು. ಕೂಡಲೇ ಅವರು ಬೆಂಗಳೂರಿಗೆ ಬಂದರು. ಗೌರ್ನಮೆಂಟ್

ಇಂಟರ್‌ಮೀಡಿಯಟ್ ಕಾಲೇಜಿಗೆ ಸೇರಿದರು. ಕೆಲವಾರು ಮನೆಪಾಠಗಳನ್ನು ಸಂಪಾದಿಸಿಕೊಂಡರು. ಇದರಿಂದ ತಿಂಗಳಿಗೆ ಸ್ವಲ್ಪ ಹಣ ಸಂಪಾದನೆಯಾಗುವಂತಾಯಿತು. ಬೆಂಗಳೂರು ಚಿಕ್ಕಪೇಟೆಯ ಗಲ್ಲಿಯೊಂದರಲ್ಲಿ ಒಂದು ರೂಮು ಮಾಡಿಕೊಂಡರು. ಈ ರೀತಿಯಲ್ಲಿ ಅವರ ಬೆಂಗಳೂರು ವಿದ್ಯಾರ್ಥಿ ಜೀವನ ಪ್ರಾರಂಭವಾಯಿತು.

ಬೆಂಗಳೂರು ಸಾಹಿತ್ಯ ಸಂಸ್ಕೃತಿಗಳ ಚಟುವಟಿಕೆ ತುಂಬಿಕೊಂಡಿದ್ದ ಊರು. ಹಿರಿಯ ಸಾಹಿತಿಗಳು, ಹೆಸರಾಂತ ಪ್ರಾಧ್ಯಾಪಕರುಗಳು ಇದ್ದ ಸ್ಥಳ. ಕನ್ನಡ, ಇಂಗ್ಲಿಷು ಭಾಷೆಗಳಲ್ಲಿ ಅನೇಕ ಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಸಿ. ಕೆ. ವೆಂಕಟರಾಮಯ್ಯನವರಿಗೆ ಈಗಾಗಲೇ ಕನ್ನಡ, ಇಂಗ್ಲಿಷ್ ಭಾಷೆಗಳಲ್ಲಿ ಬರೆಯುವ ಅಭ್ಯಾಸವಾಗಿತ್ತು. ಆಗ ಹಿರಿಯ ಸಾಹಿತಿಗಳಾದ ಡಿ.ವಿ. ಗುಂಡಪ್ಪನವರು 'ಕರ್ನಾಟಕ' ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. 'ಮೈಸೂರು ತಾತಯ್ಯ' ಎಂದು ಪ್ರಸಿದ್ಧರಾಗಿದ್ದ ವೆಂಕಟಕೃಷ್ಣಯ್ಯನವರು 'ಸಾಧ್ವಿ' ಪತ್ರಿಕೆಯನ್ನು ನಡೆಸುತ್ತಿದ್ದರು. ಅನಿಬೆಸಂಟರ 'ಸ್ವರಾಜ್ಯ' ಎಂಬ ಪತ್ರಿಕೆಯಿತ್ತು. ಸಿ.ಕೆ. ವೆಂಕಟರಾಮಯ್ಯನವರು ಈ ಮಹನೀಯರಿಗೆಲ್ಲಾ ಕಾಗದ ಬರೆದರು: 'ನಾನು ವಿದ್ಯಾರ್ಥಿ. ಓದುವುದಕ್ಕೆ ಹಣದ ಅನುಕೂಲ ಸಾಲದು. ಲೇಖನಗಳನ್ನು ಬರೆದುಕೊಡಬಲ್ಲೆ. ಅವನ್ನು ನಿಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ನನಗೆ ಗೌರವಧನ ಕೊಡಬೇಕೆಂದು ಪ್ರಾರ್ಥಿಸುತ್ತೇನೆ.' ಸಂಪಾದಕರುಗಳು ದೊಡ್ಡ ಮನಸ್ಸಿನಿಂದ ಒಪ್ಪಿ ಇವರು ಬರೆದ ಲೇಖನಗಳನ್ನು ಪ್ರಕಟಿಸಿದರು.

ಹೇಗಾದರರದೂ ಸರಿ ಓದಬೇಕು ಎಂಬ ಮಹದಾಸೆ

ಅವರದು. ಯಾವ ಕಾರಣಕ್ಕಾದರೂ ಓದನ್ನು ಅರ್ಧಕ್ಕೆ ನಿಲ್ಲಿಸಬಾರದು ಎನ್ನುವುದೇ ಅವರ ಗುರಿ. ಆದರಿಂದ ಎಷ್ಟೇ ಕಷ್ಟವಾದರೂ, ಪಾಠಗಳನ್ನು ಹೇಳಿಕೊಡುವುದು, ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವುದು ಇವುಗಳನ್ನು ಬಿಡದೆ ಮುಂದುವರಿಸಿದರು. ಇಷ್ಟೆಲ್ಲ ಕಷ್ಟಪಟ್ಟುಕೊಂಡು ತಾವು ಓದುತ್ತಿದ್ದಾಗ, ಅವರಿಗೆ ಇನ್ನೂ ಬಡ ವಿದ್ಯಾರ್ಥಿಗಳನ್ನು ಕಂಡರೆ ಎಲ್ಲಿಲ್ಲದ ಕರುಣೆ. ಅದರಲ್ಲೂ ಹಣ ಸಂಪಾದನೆಗೆ ಯಾವ ದಾರಿಯೂ ಗೊತ್ತಿರದಿದ್ದ ವಿದ್ಯಾರ್ಥಿ ಗೆಳೆಯರನ್ನು ಕಂಡರೆ ಮರುಕ. 'ತಾನಾದರೋ ಪಾಠ ಹೇಳಿಕೊಟ್ಟು ಪತ್ರಿಕೆಗಳಿಗೆ ಲೇಖನಗಳನ್ನು ಬರೆದುಕೊಟ್ಟು ಊಟ-ಓದು ಮುಗಿಸುತ್ತಿದ್ದೇನೆ. ಪಾಪ, ಈ ಹುಡುಗರಿಗೆ ಅದೂ ಗೊತ್ತಿಲ್ಲ' ಎಂದುಕೊಳ್ಳುತ್ತ ತಮ್ಮ ಸಂಪಾದನೆಯಲ್ಲೇ ಗೆಳೆಯರಿಗೆ ಓದಲು ಸಹಾಯ ಮಾಡುತ್ತಿದ್ದರು. ಎಂತಹ ವಿಶಾಲವಾದ ಮನಸ್ಸು ಅವರದು! ಹೀಗೆ ಅವರಿಂದ ಹಣ ಸಹಾಯ ಪಡೆದು ಓದಿದ ಅನೇಕರು ದೊಡ್ಡ ದೊಡ್ಡ ಪರೀಕ್ಷೆಗಳನ್ನು ಇವರ ಸಹಾಯದಿಂದ ಪಾಸು ಮಾಡಿ, ದೊಡ್ಡ ಉದ್ಯೋಗದಲ್ಲಿದ್ದು, ಸುಖವಾಗಿ ಬಾಳಿ ಬದುಕಿದವರಾಗಿದ್ದಾರೆ.

ಇಂಟರ್ ಮೀಡಿಯಟ್ ಪರೀಕ್ಷೆಯಲ್ಲಿ ತೇರ್ಗಡೆಯಾಯಿತು. ಮುಂದೆ ಬಿ.ಎ. ಓದಲು ಸೆಂಟ್ರಲ್ ಕಾಲೇಜು ಸೇರಬೇಕು. ಆ ವೇಳೆಗೆ ಮನೆಯವರು ಇವರನ್ನು ಊರಿಗೆ ಕರೆಸಿಕೊಂಡರು. ಬಾಣಾವರದ ಜಾವಗಲ್ಲಿಗೆ ಸೇರಿದ್ದ ಬಿ. ಕೃಷ್ಣರಾವ್ ಮತ್ತು ಸೀತಮ್ಮ ದಂಪತಿಗಳ ಪುತ್ರಿ ವೆಂಕಟಸುಬ್ಬಮ್ಮ ಎಂಬುವವರೊಂದಿಗೆ ಸಿ.ಕೆ. ವೆಂಕಟರಾಮಯ್ಯನವರ ಮದುವೆ ನಡೆಯಿತು.

## ಗುರುಗಳ ಆಶೀರ್ವಾದ—ಕನ್ನಡದ ನಂಟು

ಊರಿಂದ ಬಂದಮೇಲೆ ಸಿ. ಕೆ. ವೆಂಕಟರಾಮಯ್ಯ ನವರು ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಕನ್ನಡ ಬಿ.ಎ. ಓದಲು ಸೇರಿದರು. ಸೆಂಟ್ರಲ್ ಕಾಲೇಜಿನಲ್ಲಿ ಆಗಲೇ ಸಾಹಿತ್ಯದ ಚಟುವಟಿಕೆಗಳು ಬೇಕಾದಹಾಗೆ ನಡೆಯುತ್ತಿದ್ದವು. ಪ್ರಸಿದ್ಧ ಸಾಹಿತಿಗಳು ಪಾಠ ಹೇಳುತ್ತಿದ್ದರು. ಪ್ರತಿಭಾನ್ವಿತ ವಿದ್ಯಾರ್ಥಿಗಳು ಈ ಮಹನೀಯರಿಂದ ಜ್ಞಾನಾರ್ಜನೆ ಮಾಡುತ್ತಿದ್ದರು. ಇಂಗ್ಲಿಷಿನವರೂ ಸಹಾ ಪಾಠಹೇಳಿಕೊಡುತ್ತಿದ್ದರು, ಪ್ರಿನ್ಸಿಪಾಲರು ಇಂಗ್ಲಿಷಿನವರಾಗಿದ್ದರು. ಸೆಂಟ್ರಲ್ ಕಾಲೇಜೆಂದರೆ ಪ್ರಸಿದ್ಧ ವ್ಯಕ್ತಿಗಳು ಓದಿದ್ದ ಕಾಲೇಜೆಂದು ಪ್ರಸಿದ್ಧಿಯಾಗಿತ್ತು. ಮೈಸೂರು ರಾಜ್ಯದ ಆಧುನಿಕ ಶಿಲ್ಪಿಯೆನಿಸಿದ, ಪ್ರಸಿದ್ಧ ಇಂಜಿನಿಯರ್ ಸರ್. ಎಂ. ವಿಶ್ವೇಶ್ವರಯ್ಯನವರು ಸೆಂಟ್ರಲ್ ಕಾಲೇಜಿನಲ್ಲಿ ಓದಿದವರು. ಇಂತಹ ವಿದ್ಯಾರ್ಥಿಗಳು ಓದಿದ ಕಾಲೇಜು; ಇಂತಹ ವಿದ್ಯಾರ್ಥಿಗಳನ್ನು ತಯಾರು ಮಾಡಿದ ಗುರುಗಳಿದ್ದ ಕಾಲೇಜು ಎಂತಹ ಉತ್ತಮ ಮಟ್ಟದಲ್ಲಿತ್ತೆಂದು ನೀವೇ ಊಹಿಸಿಕೊಳ್ಳಬಹುದು.

ಸಿ. ಕೆ. ವೆಂಕಟರಾಮಯ್ಯನವರು ಪುನಃ ಮೊದಲಿನ ಹಾಗೆಯೇ ಚಿಕ್ಕಪೇಟೆಯ ಓಣಿಯೊಂದರಲ್ಲಿ ರೂಮು ಮಾಡಿಕೊಂಡರು. ಖರ್ಚಿಗೆ ಹಣ ಸಂಪಾದಿಸಲು ಪಾಠಗಳನ್ನು ಹೇಳತೊಡಗಿದರು. ಪತ್ರಿಕೆಗಳಿಗೆ ಲೇಖನಗಳನ್ನು ಬರೆದರು. ಕನ್ನಡ ಮತ್ತು ಇಂಗ್ಲಿಷು ಭಾಷೆಗಳಲ್ಲಿರುವ

ಉತ್ತಮ ಸಾಹಿತ್ಯವನ್ನೆಲ್ಲಾ ಓದಿದರು. ದಿನೇ ದಿನೇ ತಮ್ಮ ಜ್ಞಾನಭಂಡಾರವನ್ನು ತುಂಬಿಸಿಕೊಂಡರು. ತಮ್ಮ ಜ್ಞಾನವನ್ನು ಜೊತೆಗಾರರಿಗೂ, ತಮಗಿಂತ ಚಿಕ್ಕವರಿಗೂ ನಿರ್ವಂಚನೆಯಿಂದ ಹಂಚಿದರು. ಬಡವಿದ್ಯಾರ್ಥಿಗಳಿಗೆ ಹಣ ಸಹಾಯ ಮಾಡುವುದನ್ನು ಬಿಡದೇ ನಡೆಸಿಕೊಂಡು ಬಂದರು.

ಸೆಂಟ್ರಲ್ ಕಾಲೇಜಿನಲ್ಲಿ ಆಗ ಕನ್ನಡದ ಪಾಠ ಹೇಳಿಕೊಡಲು ಎ. ಆರ್. ಕೃಷ್ಣಶಾಸ್ತ್ರಿಗಳಂತಹ ಕನ್ನಡ ವಿದ್ವಾಂಸರು ಸಿಕ್ಕಿದ್ದು ವೆಂಕಟರಾಮಯ್ಯನವರ ಅದೃಷ್ಟ. ಕೃಷ್ಣಶಾಸ್ತ್ರಿಗಳು ಶಿಷ್ಯನ ಕನ್ನಡ ಭಕ್ತಿಯನ್ನೂ, ಪಾಂಡಿತ್ಯವನ್ನೂ ಬಹಳ ಬೇಗ ತಿಳಿದುಕೊಂಡರು. ಓದಬೇಕು, ಓದಿ ಕನ್ನಡ ಸೇವೆ ಮಾಡಬೇಕು ಎಂದು ಶಿಷ್ಯ ಎಷ್ಟೊಂದು ಕಷ್ಟಪಡುತ್ತಿದ್ದಾನೆ ಎನ್ನುವುದೂ ಅವರಿಗೆ ಗೊತ್ತಾಯಿತು. ಅವರು ಈ ಶಿಷ್ಯನನ್ನು ಬಹಳವಾಗಿ ಮೆಚ್ಚಿಕೊಂಡರು. ವೆಂಕಟರಾಮಯ್ಯನವರಿಗೆ ಕನ್ನಡ ಸಾಹಿತ್ಯದ ಪೂರ್ಣ ಪರಿಚಯ ಮಾಡಿಕೊಟ್ಟರು. ಸಭೆಗಳಲ್ಲಿ ಮಾತನಾಡುವ ಮತ್ತು ಬರೆಯುವ ಶಕ್ತಿ ಶಿಷ್ಯನಿಗಿರುವುದನ್ನು ಕಂಡು ಸಂತೋಷ ಪಟ್ಟು ಚೆನ್ನಾಗಿ ಅವರನ್ನು ಪ್ರೋತ್ಸಾಹಿಸಿದರು. ಶಿಷ್ಯನ ಈ ಎಲ್ಲ ಗುಣಗಳೂ ಬೆಳೆಯುವಂತೆ ಪ್ರೀತಿ-ವಿಶ್ವಾಸಗಳಿಂದ ಪೋಷಿಸಿದರು. ಆಗಿನ ಕಾಲದಲ್ಲಿ ಗುರು-ಶಿಷ್ಯರ ಸಂಬಂಧ ಎಂದರೆ ತಂದೆ ಮಕ್ಕಳ ಸಂಬಂಧದ ಹಾಗಿರುತ್ತಿತ್ತು. ಶಿಷ್ಯರ ಓದು, ಊಟ, ತಿಂಡಿ, ನಿದ್ದೆ, ಕಷ್ಟ-ಸುಖ ಎಲ್ಲವನ್ನೂ ಗುರುಗಳು ವಿಚಾರಿಸಿ, ಸಹಾಯಮಾಡುತ್ತಿದ್ದರು.

ಕನ್ನಡದ ಇನ್ನೊಬ್ಬ ಪ್ರಸಿದ್ಧ ಬರಹಗಾರರಾದ ಎಸ್. ವಿ. ರಂಗಣ್ಣನವರು ಆಗ ಬಿ. ಎ. ಕ್ಲಾಸಿನಲ್ಲಿ ವೆಂಕಟ

ರಾಮಯ್ಯನವರೊಂದಿಗೆ ಓದುತ್ತಿದ್ದರು. ಇವರಿಬ್ಬರ ಸ್ನೇಹ ಹಾಲು-ಸಕ್ಕರೆಯಂತೆ ಹೊಂದಿಕೊಂಡು ಚೆನ್ನಾಗಿ ಬೆಳೆಯಿತು. ಒಬ್ಬರಿಗೊಬ್ಬರು ಸ್ನೇಹಿತರಾಗಿರುವುದು ಇಬ್ಬರಿಗೂ ಹೆಮ್ಮೆಯ ವಿಷಯವಾಗಿತ್ತು.

ಎಲ್ಲರೂ ಮಾತನಾಡುವ ಭಾಷೆ ಕನ್ನಡವಾಗಿದ್ದರೂ ಎಲ್ಲ ಕಡೆಯೂ ಇಂಗ್ಲಿಷ್ ತಾನೇ ತಾನಾಗಿ ಮೆರೆಯುತ್ತಿತ್ತು. ಆಡಳಿತದ ಹಿಡಿತವೆಲ್ಲಾ ಇಂಗ್ಲಿಷಿನವರ ಕೈಯಲ್ಲಿದ್ದುದರಿಂದ, ಕನ್ನಡ ಭಾಷೆಗೆ ಪ್ರಾಮುಖ್ಯತೆ ಕೊಟ್ಟರೆ ಇಂಗ್ಲಿಷ್ ಅಳಿಸಿ ಹೋಗುವುದೇನೋ ಎಂಬ ಭಯ ಆ ಜನರಿಗೆ. ವಿದ್ಯಾವಂತ ಕನ್ನಡಿಗರಿಗೂ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುವುದೆಂದರೆ ದೊಡ್ಡ ಹೆಮ್ಮೆ. ಅನೇಕರಿಗೆ ಕನ್ನಡದ ಮೇಲೆ ಸ್ವಲ್ಪವೂ ಅಭಿಮಾನವಿರಲಿಲ್ಲ. ಕನ್ನಡವೆಂದರೆ ತಿರಸ್ಕಾರ, ಕನ್ನಡ ಮಾತನಾಡುವುದೆಂದರೆ ಅವಮಾನ. ದೊಡ್ಡ ಹುದ್ದೆಯಲ್ಲಿದ್ದವರೊಬ್ಬರು ಆಗ, 'ಕನ್ನಡವೂ ಒಂದು ಭಾಷೆಯೇ?' ಎಂದು ಕೇಳಿದ್ದರಂತೆ. ಅಂತಹ ಕಾಲದಲ್ಲಿ ವೆಂಕಟರಾಮಯ್ಯನವರ ಗುರುಗಳಾಗಿದ್ದ ಬೆಳ್ಳಾವೆ ವೆಂಕಟನಾರಣಪ್ಪನವರು ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳು ಸೆಂಟ್ರಲ್ ಕಾಲೇಜಿನಲ್ಲಿ 'ಕರ್ನಾಟಕ ಸಂಘ'ವನ್ನು ಸ್ಥಾಪಿಸಿದರು. ಇದರ ಪ್ರಾರಂಭೋತ್ಸವದ ಸಭೆಗೆ ಅಧ್ಯಕ್ಷರಾಗಲು ಆಗ ಯಾರೂ ಒಪ್ಪಲಿಲ್ಲ. ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುವುದಾಗಿ ಎಲ್ಲರೂ ಹೇಳಿದರು. ಆದರಿದು ಗುರುಗಳಿಬ್ಬರಿಗೂ ಇಷ್ಟವಿರಲಿಲ್ಲ. ಕೊನೆಗೆ ಹಿರಿಯ ಸಾಹಿತಿಗಳಾದ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರು ಕನ್ನಡದಲ್ಲಿ ಭಾಷಣಮಾಡಲು ಒಪ್ಪಿದರು. ಈ ಸಮಯದಲ್ಲೆಲ್ಲಾ ವೆಂಕಟರಾಮಯ್ಯನವರು ಗುರುಗಳ ಆಶೀರ್ವಾದ

ಪಡೆದು ಭಾಷಣ ಮಾಡುತ್ತಿದ್ದರು. ಗುರುಗಳ ಮತ್ತು ಸಭಿಕರ ಮೆಚ್ಚುಗೆಯನ್ನು ಇವರ ಭಾಷಣ ಗಳಿಸುತ್ತಿತ್ತು.

ಅದೇ ಸಮಯದಲ್ಲಿ ಒಮ್ಮೆ 'ಕರ್ನಾಟಕ ಸಂಘ'ದ ಆಶ್ರಯದಲ್ಲಿ ಚರ್ಚಾಸ್ಪರ್ಧೆಯೊಂದು ಏರ್ಪಾಡಾಯಿತು. ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು ಮಾತ್ರ ಮಾತನಾಡಲು ಅವಕಾಶವಿದ್ದ ಈ ಸ್ಪರ್ಧೆಯ ವಿಷಯ: "ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಭಾಷೆಗೆ ಪ್ರಾಧಾನ್ಯವಿದ್ದು, ಅದು ಶಿಕ್ಷಣ ಮಾಧ್ಯಮವಾಗಿರುವುದು ತಪ್ಪು, ಅದರ ಸ್ಥಾನದಲ್ಲಿ ಕನ್ನಡ ಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು." ಆಗ ಸರಕಾರದ ಶಿಕ್ಷಣ ಶಾಖೆಯ ಮುಖ್ಯಾಧಿಕಾರಿಗಳೂ, ಪ್ರಖ್ಯಾತ ವಿದ್ವಾಂಸರೂ ಆಗಿದ್ದ ಪ್ರೊ|| ಸಿ.ಆರ್. ರೆಡ್ಡಿಯವರು ಚರ್ಚೆಯ ದಿನ ಸಭೆಯ ಅಧ್ಯಕ್ಷತೆ ವಹಿಸಿಕೊಳ್ಳಲು ಒಪ್ಪಿಕೊಂಡಿದ್ದರು. ಈ ವಿಷಯವನ್ನು ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಡಾಕ್ಟರ್ ಇ.ಪಿ. ಮೆಟ್ಕಾಫ್ ಅವರಿಗೆ ತಿಳಿಸಿದಾಗ, ಅವರು ಚರ್ಚೆಯ ವಿಷಯಕ್ಕೆ ಆಕ್ಷೇಪಿಸಿದರು. ಆದರೂ ತಮಗೆ ಚರ್ಚೆ ಅರ್ಥವಾಗಬೇಕಾಗಿರುವುದರಿಂದ, ಅದನ್ನು ಇಂಗ್ಲಿಷಿನಲ್ಲೇ ನಡೆಸಬೇಕೆಂದೂ ಆಜ್ಞಾಪಿಸಿಬಿಟ್ಟರು. ವಿಧಿಯಿಲ್ಲದೆ ಗುರುಗಳಿಬ್ಬರೂ ಕನ್ನಡದ ವಿಷಯದ ಚರ್ಚೆಯನ್ನು ಇಂಗ್ಲಿಷಿನಲ್ಲಿ ನಡೆಸಲು ತೀರ್ಮಾನಿಸಿದರು.

ಚರ್ಚೆ ಪ್ರಾರಂಭವಾಯಿತು. ತಮ್ಮ ಸರದಿ ಬಂದಾಗ ವೆಂಕಟರಾಮಯ್ಯನವರು ಎದ್ದುನಿಂತರು. ಕನ್ನಡ ಅವರಿಗೆ ತುಂಬಾ ಇಷ್ಟವಾದ ವಿಷಯ. ಇಂಗ್ಲಿಷಿನಲ್ಲಿ ಅವರು ಮಾತನಾಡಿ, ಕನ್ನಡವೇ ಶಿಕ್ಷಣ ಭಾಷೆಯಾಗಬೇಕೆಂದು ವಾದಿಸಿದರು. ಕನ್ನಡದ ವಿಷಯವನ್ನು ಇಂಗ್ಲಿಷಿನಲ್ಲಿ ಚರ್ಚಿಸ

ಬೇಕಾಗಿ ಬಂದಿರುವುದೂ ದುರ್ದೈವ ಎಂದೂ ಹೇಳಿಬಿಟ್ಟರು. ಪ್ರೇಕ್ಷಕರಲ್ಲಿ ಅನೇಕರು 'ನಾಚಿಕೆಗೇಡು, ನಾಚಿಕೆಗೇಡು' ಎಂದು ಕೂಗಿದರು. ಕನ್ನಡಕ್ಕೆ ದೊಡ್ಡ ಸ್ಥಾನಬರುವುದು ಅನೇಕ 'ಇಂಗ್ಲಿಷ್ ಪ್ರಿಯ'ರಿಗೆ ಇಷ್ಟವಿರಲಿಲ್ಲ. ಪ್ರಿನ್ಸಿಪಾಲರು ವೆಂಕಟರಾಮಯ್ಯನವರ ಕಡೆ ಅಸಮಾಧಾನ ತುಂಬಿದ್ದ ದೃಷ್ಟಿ ಬೀರುತ್ತಿದ್ದರು. ವೆಂಕಟರಾಮಯ್ಯ. ನವರು ದಿಟ್ಟತನದಿಂದೇನೋ ಮಾತನಾಡಿದ್ದರು. ಆದರೆ ಇಂಗ್ಲಿಷ್ ಪ್ರಿನ್ಸಿಪಾಲರ ದೃಷ್ಟಿ ಭಯಹುಟ್ಟಿಸಿತು. ಚರ್ಚೆ ಮುಗಿಯಿತು. ನಿರ್ಣಯವನ್ನು ಮತಕ್ಕೆ ಹಾಕಿದಾಗ ವಿಷಯ ಬಿದ್ದುಹೋಯಿತು. 'ಕನ್ನಡ ಶಿಕ್ಷಣ ಮಧ್ಯಮ ವಾಗುವುದು ಬೇಡ', ಎಂದು ನಿರ್ಣಯವಾದಾಗ ವೆಂಕಟ ರಾಮಯ್ಯನವರಿಗೆ ತಡೆಯಲಾರದ ದುಃಖ, ಬೇಸರ, ಕೋಪ ಬಂತು. ಆದರೆ ಅಷ್ಟರಲ್ಲಿ ಅಂದಿನ ಸ್ಪರ್ಧೆಯ ಅಧ್ಯಕ್ಷರಾಗಿದ್ದ ಸಿ. ಆರ್. ರೆಡ್ಡಿಯವರು ಪ್ರಿನ್ಸಿಪಾಲರ ಎದುರಿಗೇ ನಡೆದು ಬಂದು, 'ಬಹಳ ಸ್ವಾರಸ್ಯವಾಗಿಯೂ, ಚೆನ್ನಾಗಿಯೂ, ತರ್ಕಬದ್ಧವಾಗಿಯೂ ಭಾಷಣಮಾಡಿ ವಿಷಯವನ್ನು ಚರ್ಚಿಸಿದೆ' ಎಂದು ವೆಂಕಟರಾಮಯ್ಯನವರ ಬೆನ್ನು ತಟ್ಟಿದರು. ಇವರ ಬೇಸರ ದುಃಖವೆಲ್ಲಾ ಹಾರಿ ಹೋಯಿತು. ಇವರು ಉಬ್ಬಿ ಹೋದರು. ಬೆಳ್ಳಾವೆ ವೆಂಕಟ ನಾರಣಪ್ಪನವರೂ, ಎ.ಆರ್. ಕೃಷ್ಣಶಾಸ್ತ್ರಿಗಳೂ ಶಿಷ್ಯನ ಕಡೆ ವಾತ್ಸಲ್ಯದಿಂದ ನೋಡಿದರು.

'ಕರ್ನಾಟಕ ಸಂಘ'ದ ಆಶ್ರಯದಲ್ಲಿ ಎ.ಆರ್. ಕೃಷ್ಣ ಶಾಸ್ತ್ರಿಗಳು 'ಪ್ರಬುದ್ಧ ಕರ್ನಾಟಕ' ಎಂಬ ಸಾಹಿತ್ಯಪತ್ರಿಕೆ ಯನ್ನು ಪ್ರಾರಂಭಿಸಿದರು. ಸಾಹಿತ್ಯ ಲಲಿತಕಲೆಗಳು, ಇತಿ ಹಾಸ, ಸಂಶೋಧನೆ, ವಿಜ್ಞಾನ ಮುಂತಾದ ಶಾಸ್ತ್ರಗಳು;

ಭಾವಗೀತೆಗಳು, ಕಥೆಗಳು, ಪುಸ್ತಕ ವಿಮರ್ಶೆಗಳು ಮುಂತಾದವುಗಳ ಮೇಲೆ ಪ್ರೌಢಲೇಖನಗಳು 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟವಾಗತೊಡಗಿದವು. ಎಷ್ಟೇ ಕಷ್ಟ ವಾದ ವಿಷಯವನ್ನಾದರೂ, ಸರಳವಾಗಿ, ಸ್ಪಷ್ಟವಾಗಿ ಕನ್ನಡದಲ್ಲಿ ತಿಳಿಸುವುದು ಸಾಧ್ಯವೆಂಬುದನ್ನು ಈ ಲೇಖನ ಗಳು ಪ್ರಕಟಿಸಿದವು. 'ಪ್ರಬುದ್ಧ ಕರ್ನಾಟಕ'ದ ಮೊದಲ ನೆಯ ಸಂಚಿಕೆಯಲ್ಲೇ ಬರಹಗಳನ್ನು ಪ್ರಕಟಿಸಿದ ಕೀರ್ತಿ ವೆಂಕಟರಾಮಯ್ಯನವರದಾಯಿತು. ಅದರಲ್ಲಿ ಅವರು 'ಸಂಯುಕ್ತಾಪಹರಣ' ಎಂಬ ಚಾರಿತ್ರಿಕ ಕಾದಂಬರಿಯನ್ನು ಧಾರಾವಾಹಿಯಾಗಿ ಬರೆದರು. ಇದರ ಕೆಲವು ಅಧ್ಯಾಯ ಗಳು, ಕೆಲವು ಸಂಚಿಕೆಯಲ್ಲಿ ಪ್ರಕಟವಾದವು.

ಪ್ರಿಯ ಗುರುಗಳಾಗಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳ ಹಾಗೆಯೇ ಕಾಲೇಜಿನ ಇನ್ನೊಬ್ಬ ಗುರುಗಳಾದ ಬೆಳ್ಳಾವೆ ವೆಂಕಟನಾರಣಪ್ಪನವರು ಸಿ. ಕೆ. ವೆಂಕಟರಾಮಯ್ಯನವರ ಬದುಕಿನಲ್ಲಿ ದೊಡ್ಡ ನಿಧಿಯ ಹಾಗೆ ದೊರಕಿದರು. ಅತ್ಯಂತ ಮೃದು ಮಾತಿನ ವ್ಯಕ್ತಿಗಳೂ, ತುಂಬಾ ಧರ್ಮಬುದ್ಧಿ ಯವರೂ, ನುರಿತ ಬರಹಗಾರರೂ ಆಗಿದ್ದ ವೆಂಕಟನಾರ ಣಪ್ಪನವರು ಉತ್ಸಾಹೀ ಕೆಲಸಗಾರರು. ಇವರ ಆತ್ಮೀಯ ಗೆಳೆತನ ಶಿಷ್ಯನಿಗೆ ಸುಲಭವಾಗಿ ಸಿಕ್ಕಿತು. ಕನ್ನಡ ಸಾಹಿ ತ್ಯದ ಕೆಲಸಗಳಲ್ಲಿ ಮುಂದಾಳುತನ ವಹಿಸುವ ಅಭ್ಯಾಸ ವನ್ನು ಶಿಷ್ಯನಿಗೆ ಮಾಡಿಸಿದ್ದಲ್ಲದೆ ಜೀವನದಲ್ಲಿ ಸತ್ಯ, ಧರ್ಮ, ನ್ಯಾಯ, ನಿಯತ್ತುಗಳನ್ನು ಹೇಳಿಕೊಟ್ಟಂತಹ ಮಹಾನುಭಾವರು ಅವರು. ಗುರುಗಳು ಶಿಷ್ಯನಿಗೆ ಆದರ್ಶ ವ್ಯಕ್ತಿಯಾದರು. ವೆಂಕಟರಾಮಯ್ಯನವರು ಗುರುಗಳ ಆದರ್ಶವನ್ನು ಮೈತುಂಬಾ ತುಂಬಿಸಿಕೊಂಡು, ಅದರ ನೆರ

ಳಲ್ಲೇ ಕೊನೆಯತನಕ ಬದುಕಿದರು. ಗುರುಗಳ ಒಳ್ಳೆಯ ಗುಣಗಳು ಶಿಷ್ಯನ ಕೈಹಿಡಿದು ನಡೆಸಿದವು.

ಇದೇ ಸಮಯದಲ್ಲಿ ಮೈಸೂರು ಸರ್ಕಾರದವರು ಒಳ್ಳೆಯ ಪುಸ್ತಕಗಳಿಗೆ ಬಹುಮಾನ ಕೊಡುವ 'ದೇವರಾಜ ಬಹದ್ದೂರ ಪಾರಿತೋಷಕ' ಯೋಜನೆಯನ್ನು ಪ್ರಕಟಿಸಿದರು. ಸ್ಪರ್ಧೆಯಲ್ಲಿ ಬಹುಮಾನ ಪಡೆಯುವ ಪುಸ್ತಕಗಳಿಗೆ ರೂಪಾಯಿ ಕೊಡುತ್ತಿದ್ದರು. ವೆಂಕಟರಾಮಯ್ಯನವರ ಗೆಳೆಯರು ಈ ಸ್ಪರ್ಧೆಗೆ ಪುಸ್ತಕ ಬರೆದು ಕಳುಹಿಸುವಂತೆ ಅವರನ್ನು ಒತ್ತಾಯ ಮಾಡಿದರು. ಸ್ನೇಹಿತರ ಒತ್ತಾಯ ಪ್ರೋತ್ಸಾಹಗಳಿಂದ ವೆಂಕಟರಾಮಯ್ಯನವರು ಇಂಗ್ಲಿಷಿನಲ್ಲಿ 'ಕಾನ್‌ಸ್ಟಿಟ್ಯೂಷನಲ್ ಹಿಸ್ಟರಿ' (Constitutional History) ಎಂಬ ಪುಸ್ತಕವನ್ನೂ ಮತ್ತು ಕನ್ನಡದಲ್ಲಿ 'ಅರ್ಗಳಕುಮಾರಿ' ಎಂಬ ಕಾದಂಬರಿಯನ್ನೂ ಬರೆದು ಸ್ಪರ್ಧೆಗೆ ಕಳುಹಿಸಿಕೊಟ್ಟರು. ಸ್ನೇಹಿತರೆಲ್ಲಾ ಅಂದು ಕೊಂಡಂತೆ ಇವರ ಎರಡು ಪುಸ್ತಕಗಳಿಗೂ ಬಹುಮಾನ ಬಂದಿತು. ಇಂಗ್ಲಿಷ್ ಪುಸ್ತಕಕ್ಕೆ ಐನೂರು ರೂಪಾಯಿ ಮತ್ತು ಕನ್ನಡ ಪುಸ್ತಕಕ್ಕೆ ನೂರುರೂಪಾಯಿ ಬಹುಮಾನ ಬಂದವು. ವೆಂಕಟರಾಮಯ್ಯನವರಿಗೂ ಸಂತೋಷವಾಯಿತು. ತಾನೂ ಬರೆಯಬಲ್ಲೆ, ಬರೆದದ್ದು ವ್ಯರ್ಥವಾಗುವುದಿಲ್ಲ ಎಂಬ ಧೈರ್ಯ ಬಂದಿತು. ಅವರ ಬರೆಯುವ ಉತ್ಸಾಹ ಹೆಚ್ಚಿತು.

ಈ ರೀತಿ ಯಶಸ್ವಿಯಾಗಿ ಬಿ.ಎ. ವ್ಯಾಸಂಗ ಮುಗಿಯಿತು. ಉತ್ತಮ ಮಟ್ಟದಲ್ಲಿ ಪಾಸೂ ಆಗಿ ಪದವೀಧರರಾಗಿದ್ದೂ ಆಯಿತು. ಮುಂದೆ ಏನು ಮಾಡಬೇಕೆಂಬ ಪ್ರಶ್ನೆ ಎದ್ದಿತು. 'ಓದು ಸಾಕು, ಕೆಲಸಕ್ಕೆ ಸೇರು' ಎಂದರು

ಮನೆಯವರು. ವೆಂಕಟರಾಮಯ್ಯನವರಿಗೆ ಇಷ್ಟು ಓದಿದ್ದು ತೃಪ್ತಿ ತಂದಿರಲಿಲ್ಲ. ಕನ್ನಡದಲ್ಲಿ ಎಂ.ಎ. ಓದಬೇಕು ಎಂಬುದು ಅವರ ಆಸೆ. ಹಣ ಸಂಪಾದನೆಗಿಂತ ಜ್ಞಾನಾರ್ಜನೆ ಅವರ ಗುರಿಯಾಗಿತ್ತು. ಕನ್ನಡದ ಕೆಲಸ ಮಾಡಲು ತಮ್ಮ ಬದುಕು ಮುಡಿಪಾಗಬೇಕು, ಅದಕ್ಕೆ ತಕ್ಕಂತೆ ಮುಂದುವರಿಯಬೇಕು ಎಂಬ ಯೋಚನೆ ಅವರದು.

## ದೊಡ್ಡ ಓದು—ಉದ್ಯೋಗ—ಗೌರವ

ಕನ್ನಡದಲ್ಲಿ ಎಂ.ಎ. ಓದಲು ಆಗ ಬೆಂಗಳೂರಿನಲ್ಲಿ ಅನುಕೂಲವಿರಲಿಲ್ಲ. ಮೈಸೂರಿಗೆ ಹೋಗಬೇಕಾಗಿತ್ತು. ದೂರದ ಬೊಂಬಾಯಿಯಲ್ಲಿಯೂ ಸಹಾ ಆ ಅನುಕೂಲವಿತ್ತು. ಏನಾದರೂ ಸಣ್ಣಪುಟ್ಟ ಕೆಲಸಗಳನ್ನು ಮಾಡಿಕೊಂಡು ಬೊಂಬಾಯಿಯಲ್ಲೇ ಓದು ಪೂರೈಸುವುದು ಎಂದು ವೆಂಕಟರಾಮಯ್ಯನವರು ಅಂದುಕೊಂಡರು. ಜೊತೆಗೆ ಕಾನೂನು ಪರೀಕ್ಷೆಯಾದ ಎಲ್‌ಎಲ್.ಬಿ. ಅನ್ನೂ ಅಲ್ಲಿ ಮಾಡಬಹುದೆಂಬ ಆಲೋಚನೆ ಬಂತು. ಬೊಂಬಾಯಿಗೆ ಹೋಗುವುದೆಂಬ ಯೋಚನೆ, ನಿರ್ಧಾರ ಆದಕೂಡಲೇ, ಬೆಂಗಳೂರು ಬಿಟ್ಟು ಬೊಂಬಾಯಿಗೆ ಹೊರಟುಬಿಟ್ಟರು.

ಅವರಿಗೆ ದೇವರ ಆಶೀರ್ವಾದ ಚೆನ್ನಾಗಿದ್ದಿರಬೇಕು. ಅವರ ಒಳ್ಳೆಯ ಮನಸ್ಸಿಗೆ ಮತ್ತು ಒಳ್ಳೆಯ ನಡವಳಿಕೆಗೆ ತಕ್ಕಂತೆ ಬೊಂಬಾಯಿಯಲ್ಲಿ ಅನುಕೂಲವಾಯಿತು. ಬೊಂಬಾಯಿಯಲ್ಲಿ ದೊಡ್ಡ ಪುಸ್ತಕ ವ್ಯಾಪಾರಿಯೊಬ್ಬರು ಮಹಮ್ಮದೀಯ ಮತದ ಪುಸ್ತಕಗಳನ್ನು ಎಲ್ಲ ಭಾಷೆಗಳಲ್ಲೂ ಅನುವಾದ ಮಾಡಿಸಿ ಪ್ರಕಟಿಸುತ್ತಿದ್ದರು.

ಕನ್ನಡದಲ್ಲಿ ಈ ಪುಸ್ತಕಗಳನ್ನು ಅನುವಾದಿಸಿಕೊಡುವ ಕೆಲಸ ವೆಂಕಟರಾಮಯ್ಯನವರಿಗೆ ಸಿಕ್ಕಿತು. ಈ ಕೆಲಸದಿಂದ ಅವರಿಗೆ ಹಣದ ತೊಂದರೆ ತಪ್ಪುವಂತಾಯಿತು. ಕೂಡಲೇ ಅವರು ಕಾಲೇಜಿಗೆ ಸೇರಿದರು. ಕನ್ನಡ ಎಂ. ಎ. ಓದಲು ಬೆಳಗಿನ ಕಾಲೇಜು ಮತ್ತು ಎಲ್‌ಎಲ್.ಬಿ. ಓದಲು ಸಂಜೆ ಕಾಲೇಜು. ಎರಡು ವರ್ಷಗಳಲ್ಲೇ ಈ ಎರಡು ಡಿಗ್ರಿಗಳನ್ನು ಪಡೆಯಬೇಕೆಂದು ಅವರು ನಿರ್ಧರಿಸಿದರು. ಹಣ ಮತ್ತು ಸಮಯ ಈ ಎರಡನ್ನೂ ಉಳಿಸುವುದು ಅವರ ಯೋಚನೆಯಾಗಿತ್ತು. ಮಾತುಂಗಾ ಎಂಬ ಕಡೆ ಕೊಠಡಿಯೊಂದನ್ನು ಮಾಡಿಕೊಂಡು, ಇನ್ನಿಬ್ಬರು ಗೆಳೆಯರನ್ನು ಜೊತೆಗೆ ಸೇರಿಸಿಕೊಂಡರು. ಅಂಗಡಿಯಿಂದ ಪದಾರ್ಥಗಳನ್ನು ತಂದು ತಾವೇ ಅಡುಗೆಮಾಡಿಕೊಳ್ಳುತ್ತಿದ್ದರು. ಅಡುಗೆ ಕೆಲಸ, ಬೆಳಗಿನ ಕಾಲೇಜು, ಸಂಜೆಯ ಕಾಲೇಜು, ರಾತ್ರಿ ಅನುವಾದದ ಕೆಲಸ ಮತ್ತು ಓದುವ ಕೆಲಸ ಹೀಗೆ ಕಷ್ಟಪಟ್ಟು ದುಡಿದರು. ಬೊಂಬಾಯಿಗೆ ಬಂದ ಕೆಲಸವನ್ನು ಸಾಧಿಸಿದರು. ಎರಡೇ ವರ್ಷಗಳಲ್ಲಿ ಎಂ. ಎ., ಎಲ್‌ಎಲ್. ಬಿ. ಡಿಗ್ರಿಗಳನ್ನು ಪಡೆದುಕೊಂಡರು.

ದೊಡ್ಡ ಓದನ್ನು ಮುಗಿಸಿಕೊಂಡು ಬೆಂಗಳೂರಿಗೆ ಬಂದರು. ಮೈಸೂರಿಗೆ ಹತ್ತಿರವಿರುವ ಶ್ರೀರಂಗಪಟ್ಟಣದಲ್ಲಿ ದೇವೋಜಿರಾಯರು ಎಂಬ ದೊಡ್ಡ ವಕೀಲರ ಹತ್ತಿರ ಜೂನಿಯರ್ ಆದರು. ಅನೇಕ ಕೇಸುಗಳಲ್ಲಿ ಯಶಸ್ವಿಯಾಗಿ ವಾದಿಸಿ ಗೆದ್ದರು. ಇವರಿಗೆ ವಕೀಲ ವೃತ್ತಿಯಲ್ಲಿ ಒಳ್ಳೆಯ ಭವಿಷ್ಯವಿದೆ ಎಂದು ಎಲ್ಲರೂ ಹೇಳಿದರು. ಬೇಕಾದಷ್ಟು ಸಂಪಾದಿಸಬಹುದು ಎಂದು ನೆಂಟರಿಷ್ಟರು ಬೆನ್ನು ತಟ್ಟಿದರು. ಆದರೆ ವೆಂಕಟರಾಮಯ್ಯನವರಿಗೆ ಈ ಕೆಲಸದಿಂದ ಯಾವ

ತೃಪ್ತಿಯೂ ದೊರಕಲಿಲ್ಲ ಎಷ್ಟೇ ಯಶಸ್ಸು ಸಿಕ್ಕಿದರೂ, ಎಷ್ಟೇ ಹಣ ಸಂಪಾದನೆಯಾದರೂ, ಅವರ ಮನಸ್ಸಿನಲ್ಲಿ 'ತಮ್ಮ ಜೀವನ ವ್ಯರ್ಥವಾಗುತ್ತಿದೆ. ಕನ್ನಡದ ಕೆಲಸಕ್ಕಾಗಿ ಏನೂ ಮಾಡುತ್ತಿಲ್ಲ. ಕನ್ನಡದ ಕೆಲಸ ಮಾಡಬೇಕು' ಎಂದು ಕೊರೆಯುತ್ತಿತ್ತು. ಈ ಚಡಪಡಿಕೆಯಲ್ಲಿಯೇ ಇವರು ಒಂದು ವರ್ಷ ಕಾನೂನಿನ ಕೆಲಸ ಮಾಡಿದರು.

ಇದೇ ಸಮಯದಲ್ಲಿ ಮೈಸೂರು ಸರ್ಕಾರದ ಪ್ರಕಟಣೆಯೊಂದು ಅವರ ಕಣ್ಣಿಗೆ ಬಿತ್ತು. ಆಗಿನ ಮೈಸೂರು ಅಸೆಂಬ್ಲಿಯಲ್ಲಿ ಮಹಾರಾಜರು, ದಿವಾನರು ಮೊದಲಾದವರು ಮತ್ತು ಇವರ ಹಿರಿಯ ಅಧಿಕಾರಿಗಳು ಭಾಷಣವನ್ನು ಇಂಗ್ಲಿಷಿನಲ್ಲಿ ಮಾಡುತ್ತಿದ್ದರು. ಈ ಭಾಷಣಗಳನ್ನೆಲ್ಲಾ ಕನ್ನಡದಲ್ಲಿ ಅನುವಾದಿಸಿ ಸರ್ಕಾರದಲ್ಲಿ ರೆಕಾರ್ಡು ಮಾಡಿಕೊಳ್ಳಬೇಕು ಎಂದು ಸರ್ಕಾರಕ್ಕೆ ಅನ್ನಿಸಿದಾಗ, 'ಮುಖ್ಯ ಅನುವಾದಕರು' ಎಂಬ ಹುದ್ದೆಯನ್ನು ಸರ್ಕಾರ ನಿರ್ಮಿಸಿತು. ಈ ಹುದ್ದೆಗೆ ತಕ್ಕವರನ್ನು ಆರಿಸಲು ಸರ್ಕಾರ ಪರೀಕ್ಷೆಯೊಂದನ್ನು ಏರ್ಪಡಿಸಿತು. ಐದಾರು ಮಂದಿ ಗೆಳೆಯರೊಂದಿಗೆ ಸಿ. ಕೆ. ವೆಂಕಟರಾಮಯ್ಯನವರು ಈ ಪರೀಕ್ಷೆಗೆ ಕುಳಿತರು. ಫಲಿತಾಂಶ ಬಂದಾಗ ತೇರ್ಗಡೆಯಾದವರಲ್ಲಿ ಮೊದಲ ಹೆಸರು ವೆಂಕಟರಾಮಯ್ಯನವರದು. ಸರ್ಕಾರ ಇವರನ್ನು ಸರ್ಕಾರದ 'ಮುಖ್ಯ ಅನುವಾದಕ'ರಾಗಿ ನಿಯಮಿಸಿತು. ಈ ಪರೀಕ್ಷೆಯಲ್ಲಿ ಇವರಿಗಿಂತ ಹಿರಿಯರೊಬ್ಬರು ಎರಡನೆ ಸ್ಥಾನ ಪಡೆದಾಗ, ತಮ್ಮ ಮೊದಲನೆ ಸ್ಥಾನವನ್ನು ಮರ್ಯಾದೆಯಿಂದ ಅವರಿಗಾಗಿ ಬಿಟ್ಟುಕೊಡಲು ವೆಂಕಟರಾಮಯ್ಯನವರು ಯೋಚಿಸಿದರು. ಆದರೆ ಮೇಲಧಿಕಾರಿಗಳ ಮತ್ತು ಗೆಳೆಯರ ಬಲವಂತದಿಂದ

ಈ ಯೋಚನೆ ಬಿಟ್ಟು, ತಾವೇ ಆ ಹುದ್ದೆಯನ್ನು ಅಲಂಕರಿಸಿದರು.

ಮುಖ್ಯ ಅನುವಾದಕರ ಹುದ್ದೆಯಲ್ಲಿ ಸಿ.ಕೆ. ವೆಂಕಟರಾಮಯ್ಯನವರು ಮೂವತ್ತು ವರ್ಷಗಳು ಅವಿರತರಾಗಿ ದುಡಿದು, ಕನ್ನಡ ನಾಡಿಗೂ, ಕನ್ನಡ ಭಾಷೆಗೂ ಮಹತ್ತರವಾದ ಸೇವೆ ಮಾಡಿದರು. ಮುಖ್ಯ ಅನುವಾದಕರಾಗಿ ಸರ್ಕಾರಿ ನೌಕರರಾಗಿದ್ದ ಅವರು ಹೃದಯಪೂರ್ವಕವಾಗಿ, ಆ ಕೆಲಸದಲ್ಲಿ ದುಡಿದರು. ಅನುವಾದದ ಕೆಲಸದಲ್ಲಿ ಕನ್ನಡ ಭಾಷೆಗೆ ಅನೇಕಾನೇಕ ಹೊಸ ಪದಗಳನ್ನು ತಂದು ಕೊಟ್ಟರು. ಈ ಉದ್ಯೋಗದಿಂದ ಕನ್ನಡ ಕೆಲಸಮಾಡುವ ಅವಕಾಶ ತುಂಬ ಸಿಕ್ಕಿತಲ್ಲ ಎಂದು ಅವರಿಗೆ ಸಂತೋಷವಾಗಿತ್ತು. ಅವರು ಕನ್ನಡ ಭಾಷಾಂತರಕಾರರಾಗಿ ದೊಡ್ಡ ಸಾಧನೆಯನ್ನು ಮಾಡಿದರು. ಅವರ ಅನುವಾದಗಳು, ಅನುವಾದ ಎನ್ನಿಸದೆ ಕನ್ನಡದಲ್ಲಿಯೇ ಮೊದಲು ಬರೆದುದು ಎನ್ನುವ ಹಾಗಿರುತ್ತಿದ್ದವು. ತಾವು ಯಾವಾಗಲೂ ಆಫೀಸಿನ ಕೆಲಸ ಮಾಡುತ್ತಿದ್ದುದೂ ಅಲ್ಲದೆ ತಮ್ಮ ಕೈಕೆಳಗಿನವರು ಮಾಡುತ್ತಿದ್ದ ಅನುವಾದವನ್ನು ಮನೆಗೆ ತಂದು ರಾತ್ರಿ ಬಹಳ ಹೊತ್ತು ಕುಳಿತು, ಮತ್ತೊಮ್ಮೆ ಅವುಗಳನ್ನು ತಿದ್ದಿ, ಬೇಕಾದಷ್ಟು ಕಡೆ ಹೊಡೆದುಹಾಕಿಯೋ ಅಥವಾ ಎಲ್ಲವನ್ನೂ ಮೊದಲಿನಿಂದ ಬರೆದೋ ಸರಿಪಡಿಸುತ್ತಿದ್ದರು. 'ದೊಡ್ಡ ದೊಡ್ಡ ಅಧಿಕಾರಿಗಳು ಈ ಅನುವಾದಗಳನ್ನು ನೋಡುತ್ತಾರೆ. ಹೇಗೆಂದರೆ ಹಾಗೆ ಬರೆದು ಕಳುಹಿಸಬಾರದು. ಅನುವಾದ ಅಚ್ಚುಕಟ್ಟಾಗಿರಬೇಕು' ಎನ್ನುತ್ತಿದ್ದರು. ಸೆಂಟ್ರಲ್ ಕಾಲೇಜಿನಲ್ಲಿ ಗುರುಗಳಾಗಿದ್ದ ಬೆಳ್ಳಾವೆ ವೆಂಕಟನಾರಣಪ್ಪನವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧಿ

ಕಾರವರ್ಗದಲ್ಲಿದ್ದರು. ತಮ್ಮ ಎಲ್ಲ ಕನ್ನಡ ಸೇವೆಯನ್ನು ಅವರು ಪರಿಷತ್ತಿನ ಮೂಲಕವೇ ಮಾಡಿದರು. ಈ ಗುರುಗಳು ತಮ್ಮ ಪ್ರಿಯ ಶಿಷ್ಯರಾದ ಸಿ. ಕೆ. ವೆಂಕಟರಾಮಯ್ಯನವರ ಕನ್ನಡ ಪ್ರೀತಿಯನ್ನು ಚೆನ್ನಾಗಿ ಉಪಯೋಗಿಸಿಕೊಂಡರು. ಗುರು–ಶಿಷ್ಯರಿಬ್ಬರೂ ಪರಿಷತ್ತಿನ ಕೆಲಸಗಳನ್ನು ಹಂಚಿಕೊಂಡರು. ಪರಿಷತ್ತಿಗಾಗಿ ಧನದಾತರನ್ನೂ, ಸದಸ್ಯರನ್ನೂ ಹೊಂದಿಸುವುದು, ಪರಿಷತ್ತಿನಲ್ಲಿ ಬೇಕಾದಷ್ಟು ಕನ್ನಡದ ಕಾರ್ಯಕ್ರಮಗಳನ್ನು ನಡೆಸುವುದು ಮೊದಲಾದವುಗಳಲ್ಲಿ ಇಬ್ಬರೂ ಹೆಗಲಿಗೆ ಹೆಗಲುಕೊಟ್ಟು ದುಡಿದರು. ವೆಂಕಟರಾಮಯ್ಯನವರಿಗೆ ಸ್ವಂತ ಕೆಲಸಗಳಿಗೆ ಸಮಯವೇ ಸಾಲದು; ಅಷ್ಟೊಂದು ಕನ್ನಡದ ಕೆಲಸವಿತ್ತು.

ಈ ಬಿಡುವಿಲ್ಲದ ಕೆಲಸಗಳ ನಡುವೆ ಸಿ. ಕೆ. ವೆಂಕಟರಾಮಯ್ಯನವರು ಅನೇಕ ಪುಸ್ತಕಗಳನ್ನು ಬರೆದರು. ಅನೇಕ ನಾಟಕಗಳನ್ನು ಬರೆದರು. ಈ ನಾಟಕಗಳನ್ನು ಆಡಿಸಲು ಗೆಳೆಯರನ್ನು ಸೇರಿಸಿದರು. ಅಮೆಚೂರ್ ಡ್ರಾಮಟಿಕ್ ಅಸೋಸಿಯೇಷನ್ ಎಂಬ ಸಂಘವನ್ನು ಸ್ಥಾಪಿಸಿದರು. ಈ ಸಂಘದ ಸದಸ್ಯರೆಲ್ಲರೂ ಬೇರೆ ಬೇರೆ ಕಡೆ ಉದ್ಯೋಗದಲ್ಲಿದ್ದು, ಬಿಡುವಿನ ವೇಳೆಯಲ್ಲಿ ನಾಟಕಗಳಲ್ಲಿ ಪಾರ್ಟು ಮಾಡುತ್ತಿದ್ದರು. ವೆಂಕಟರಾಮಯ್ಯನವರಿಗೆ ನಾಟಕಗಳೆಂದರೆ ಪಂಚಪ್ರಾಣ. ಚಿಕ್ಕಂದಿನಿಂದ ಅವರಿಗೆ ನಾಟಕಗಳನ್ನು ನೋಡುವುದೆಂದರೆ ತುಂಬಾ ಆಸೆ. ವೃತ್ತಿ ಸಂಸ್ಥೆಗಳು ನಡೆಸುತ್ತಿದ್ದ ನಾಟಕಗಳನ್ನು ಬಿಡುವು ಮಾಡಿಕೊಂಡು ನೋಡುತ್ತಿದ್ದರು.

ತಮ್ಮ ಸಂಘಕ್ಕಾಗಿ ಅವರು ಅನೇಕ ನಾಟಕಗಳನ್ನು ಬರೆದರು. ತಾವೇ ನಿಂತು ನಟರಿಗೆ ಹೀಗೆ ಮಾಡಬೇಕು,

ಹಾಗೆ ಮಾಡಬೇಕು ಎಂದು ತೋರಿಸಿ ಅಭ್ಯಾಸ ಮಾಡಿಸು ತ್ತಿದ್ದರು. ನಾಟಕ ಆಡಿಸಿ, ನೋಡಿ ಸಂತೋಷಪಡು ತ್ತಿದ್ದರು. ಪೌರಾಣಿಕ, ಚಾರಿತ್ರಿಕ, ಸಾಮಾಜಿಕ ವಸ್ತು ಗಳನ್ನು ಒಳಗೊಂಡ ನಾಟಕಗಳನ್ನು ಬರೆದರು. ಈ ನಾಟಕ ಗಳಲ್ಲಿ ಕೆಲವನ್ನು ಮಹಾರಾಜರು ಅರಮನೆಯಲ್ಲಿ ಆಡಿಸಿ, ನೋಡಿ ತುಂಬಾ ಸಂತೋಷಪಟ್ಟು ವೆಂಕಟರಾಮಯ್ಯನವ ರಿಗೆ ಸನ್ಮಾನ ಮಾಡಿದರು. 'ಮಂಡೋದರಿ' ಎಂಬ ಇವರು ಬರೆದ ನಾಟಕ ಅನೇಕ ಕಡೆ ಅಭಿನಯಿಸಲ್ಪಟ್ಟಿತು. ಪ್ರೇಕ್ಷಕ ರಿಂದಲೂ, ವಿಮರ್ಶಕರಿಂದಲೂ ತುಂಬಾ ಮೆಚ್ಚುಗೆ ಪಡೆ ಯಿತು. ಬಳ್ಳಾರಿಯಲ್ಲಿ ಆಗ ನಾಟಕವಾಡುತ್ತಿದ್ದ ಬಳ್ಳಾರಿ ರಾಘವಾಚಾರ್ಯರು 'ಮಂಡೋದರಿ'ಯನ್ನು ಓದಿಸಿ ಕೇಳಿ ಮೆಚ್ಚಿಕೊಂಡು, ಆ ನಾಟಕ ಆಡಲು ಬಯಸಿದರು. ಇದ ಕ್ಕಾಗಿ ತೆಲುಗರಾದ ಅವರು ಕನ್ನಡ ಭಾಷೆ ಕಲಿತು ಕೊಂಡರು. ಸಿ. ಕೆ. ವೆಂಕಟರಾಮಯ್ಯನವರನ್ನು ಕರೆಸಿ ಕೊಂಡು ಅವರಿಂದ ನಾಟಕದ ಅಭ್ಯಾಸ ಮಾಡಿಕೊಂಡರು. 'ಮಂಡೋದರಿ' ನಾಟಕ ಅನಂತರ ತಮಿಳು ಭಾಷೆಗೂ ಭಾಷಾಂತರವಾಯಿತು. ಮದರಾಸಿನಲ್ಲಿ ಈ ನಾಟಕವನ್ನು ಸಾವಿರಾರು ಮಂದಿ ನೋಡಿ ಸಂತೋಷಪಟ್ಟರು. ಇವರ ಇನ್ನೊಂದು ನಾಟಕ 'ನಚಿಕೇತ' ಹಿಂದಿಗೂ ಅನುವಾದ ವಾಯಿತು.

ಇವರ 'ನಮ್ಮ ಸಮಾಜ' ಮತ್ತು 'ಸುಂದರಿ' ಎಂಬ ನಾಟಕಗಳು ಆಗ ತುಂಬಾ ಜನಪ್ರಿಯವಾಗಿದ್ದವು. ಆಗಿನ ಜನಜೀವನದ ವಸ್ತುಗಳನ್ನೇ ಈ ನಾಟಕಗಳು ಒಳಗೊಂಡಿ ದ್ದವು. ವಿಧವಾ ಸಮಸ್ಯೆಯಿದ್ದ 'ಸುಂದರಿ' ನಾಟಕದಲ್ಲಿ ಸುಂದರಿ ಎಂಬ ಪಾತ್ರವನ್ನು ಜನಮೆಚ್ಚುವಂತೆ ಅಭಿನಯಿ

ಸಿದ ನಾಗೇಶರಾವ್ ಎಂಬುವವರಿಗೆ ಮುಂದೆ 'ಸುಂದರಿ' ಎಂಬ ಹೆಸರು ಬಂದಿತು.

ಸಿ.ಕೆ. ವೆಂಕಟರಾಮಯ್ಯನವರು ನುರಿತ ಬರಹಗಾರರಾಗಿರುವಂತೆ ಒಳ್ಳೆಯ ಭಾಷಣಕಾರರೂ ಆಗಿದ್ದರು. ಕನ್ನಡದ ಕೆಲಸ ಎಲ್ಲಿ ನಡೆದರೂ ಸರಿ, ಕನ್ನಡದಲ್ಲಿ ಭಾಷಣ ಮಾಡಲು ಯಾರು ಎಷ್ಟು ದೂರ ಕರೆದರೂ ಸರಿ, ಸಂತೋಷದಿಂದ ಹೋಗಿ ಭಾಷಣ ಮಾಡಿ ಬರುತ್ತಿದ್ದರು. ಅವರ ಭಾಷಣ ಕೇಳುವವರಿಗೆ ತೃಪ್ತಿಯಾಗುವಂತೆ ಮಾತನಾಡುತ್ತಿದ್ದರು. ಕಂಚಿನ ಕಂಠ ಅವರದು. ಅವರ ಭಾಷಣ ಕೇಳುತ್ತಾ ಜನ ಮೈಮರೆತು ಕುಳಿತುಬಿಡುತ್ತಿದ್ದರು. ಒಂದು ಘಂಟೆ ಭಾಷಣ ಎರಡು ಘಂಟೆಯಾದರೂ ಯಾರೂ ಏಳುತ್ತಿರಲಿಲ್ಲ.

ಅವರ ಭಾಷಣದ ಮೋಡಿ ಹೇಗಿತ್ತೆಂದರೆ, ಒಂದು ಸಲ ಇವರ ಭಾಷಣ ಅರಮನೆಯಲ್ಲಿ ಏರ್ಪಾಡಾಗಿತ್ತು. ಇವರು ಭಾಷಣ ಮಾಡುವ ಕಡೆ ಒಂದು ಗಡಿಯಾರವನ್ನು ಇಡಲಾಗಿತ್ತು. ಮಹಾರಾಜರು ಬಂದ ಕೂಡಲೇ ವೆಂಕಟರಾಮಯ್ಯನವರು ಭಾಷಣ ಪ್ರಾರಂಭಿಸಿದರು. ಗಡಿಯಾರದ ಕಡೆ ನೋಡುತ್ತಲೇ ಭಾಷಣ ಮಾಡಿ ಮುಗಿಸಿದರು. ಮರುದಿನವೂ ಭಾಷಣ ಮಾಡುವಂತೆ ಸೂಚನೆ ಬಂದಿತು. ಹೀಗೆ ಒಬ್ಬರ ಭಾಷಣವನ್ನು ಮರುದಿನವೂ ಅರಮನೆಯಲ್ಲಿ ಏರ್ಪಡಿಸುತ್ತಿದ್ದುದು ತುಂಬಾ ಅಪರೂಪ. ಮರುದಿನ ಭಾಷಣಕ್ಕೆ ಸಿದ್ಧರಾಗಿ ವೆಂಕಟರಾಮಯ್ಯನವರು ನಿಂತಾಗ, ಎದುರಿಗೆ ಗಡಿಯಾರವಿರಲಿಲ್ಲ. ಮಹಾರಾಜರು ಭಾಷಣ ಕೇಳಲು ಕುಳಿತಿದ್ದರು. ತಾವೇ ಗಡಿಯಾರವನ್ನು ತೆಗೆಸಿರುವುದಾಗಿಯೂ, ಭಾಷಣವನ್ನು ಪ್ರಾರಂಭಿಸಬೇಕೆಂದೂ ಪ್ರಭುಗಳ ಆಜ್ಞೆ

ಯಾಯಿತು. ಇವರಿಗೆ ಏನೋ ಒಂದು ರೀತಿಯ ಅಳುಕು. ಆದರೂ ಭಾಷಣ ಮಾಡಿದರು. ಒಂದು ಘಂಟೆಗೆ ನಿಗದಿಯಾಗಿದ್ದ ಭಾಷಣವನ್ನು ಎರಡು ಘಂಟೆಯ ಕಾಲ ಮಾಡಿದರು. ಮಹಾರಾಜರು ಪೂರ್ತಿ ಕುಳಿತು ಭಾಷಣ ಕೇಳಿದರು. ಭಾಷಣ ಮುಗಿದ ಮೇಲೆ ಮಹಾರಾಜರು ಮಾತನಾಡಿ, "ಕೆಲವರು ತಮ್ಮ ಪಾಂಡಿತ್ಯ ಪ್ರದರ್ಶನದಿಂದಲೇ ಪರಮಾನಂದ ಪಡೆಯುತ್ತಾರೆ, ಕೆಲವರು ತಮ್ಮ ಉಪನ್ಯಾಸದ ಆವೇಶದಲ್ಲಿ ಶ್ರೋತೃಗಳನ್ನು ಮರೆಯುತ್ತಾರೆ. ಈ ಎರಡು ದೋಷಗಳೂ ನಿಮ್ಮಲ್ಲಿಲ್ಲ. ಆದ್ದರಿಂದ ನಿಮ್ಮ ಪೂರ್ತಿ ಭಾಷಣಕ್ಕೆ ಅವಕಾಶ ನೀಡಿದೆವು" ಎಂದರು. ವೆಂಕಟರಾಮಯ್ಯನವರಿಗೆ ಸಂತೋಷವಾಯಿತು. ತಮ್ಮನ್ನು ತಾವೇ ನಂಬದಂತಾಯಿತು. ಭಕ್ತಿಯಿಂದ ಪ್ರಭುಗಳಿಗೆ ವಂದಿಸಿದರು. ಪ್ರಭುಗಳು ಇವರ ಪಾಂಡಿತ್ಯವನ್ನು ಮೆಚ್ಚಿ ಆಗಾಗ್ಗೆ ಇವರ ಭಾಷಣವನ್ನೇರ್ಪಡಿಸುತ್ತಿದ್ದರು. ವೆಂಕಟರಾಮಯ್ಯನವರು ಅರಮನೆಯಲ್ಲಿ ಒಟ್ಟು ಇಪ್ಪತ್ತಾರು ಭಾಷಣಗಳನ್ನು ಮಾಡಿದರು. ಈ ಗೌರವವನ್ನು ಪಡೆದವರ ಸಂಖ್ಯೆ ಬಹಳ ಕಡಿಮೆ.

ಅರಮನೆಯ ಭಾಷಣಗಳ ಸಂಖ್ಯೆ ಇಷ್ಟಿದ್ದರೆ, ಸಾರ್ವಜನಿಕವಾಗಿ ಇವರು ಮಾಡಿರುವ ಭಾಷಣಗಳ ಸಂಖ್ಯೆ ಕೇಳಿದರೆ ನಿಮಗೆ ಆಶ್ಚರ್ಯವಾಗಬಹುದು. ಎರಡು ಸಾವಿರಕ್ಕಿಂತಲೂ ಹೆಚ್ಚು ಭಾಷಣವನ್ನು ಇವರು ಮಾಡಿದ್ದಾರೆ. ಆಗಿನ ಕಾಲದಲ್ಲಿ ಈಗಿನ ಹಾಗೆ ಧ್ವನಿವರ್ಧಕ (ಸೌಂಡ್ ಸಿಸ್ಟಮ್) ಇರಲಿಲ್ಲ. ಧ್ವನಿವರ್ಧಕದ ಸಹಾಯವಿಲ್ಲದೆ ಎತ್ತರಿಸಿದ ದನಿಯಲ್ಲಿ ಅವರು ಮಾತನಾಡಿ ಎದುರು ಕುಳಿತಿರುವವರಿಗೆ ಮೋಡಿ ಹಿಡಿಸುತ್ತಿದ್ದರು.

ಈ ನಡುವೆ ಸಿ.ಕೆ. ವೆಂಕಟರಾಮಯ್ಯನವರು ಮೈಸೂರು ಸರ್ಕಾರ ಕೈಗೊಂಡಿದ್ದ 'ಇಂಗ್ಲಿಷ್–ಕನ್ನಡ ನಿಘಂಟು ಸಮಿತಿಯಲ್ಲಿ ಕೆಲಸಮಾಡಿದರು. ಈ ನಿಘಂಟಿನ ನಿರ್ಮಾಣಕ್ಕಾಗಿ ಅವರು ಒಂದೇ ಸಮನೆ ದುಡಿದರು. ಇವರ ಕನ್ನಡ ಸಾಹಿತ್ಯ ಪರಿಷತ್ತಿನ ಕೆಲಸವೂ ನಡೆದಿತ್ತು. ಅದರ ಕಾರ್ಯದರ್ಶಿಯಾಗಿ ೧೯೩೦ ರಿಂದ ೧೯೪೦ರ ವರೆವಿಗೆ (ನಡು ನಡುವೆ ಕೆಲವು ತಿಂಗಳು ಬಿಟ್ಟು) ಇವರು ಹತ್ತು ವರ್ಷ ದುಡಿದರು. ಇಷ್ಟು ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಚರಿತ್ರೆಯಲ್ಲೀ ಬೇರೆ ಯಾರೂ ಕಾರ್ಯದರ್ಶಿಗಳಾಗಿ ದುಡಿದಿಲ್ಲ. ಕನ್ನಡ ಕೆಲಸಕ್ಕಾಗಿ ತಮ್ಮ ತನು, ಮನ, ಧನಗಳನ್ನು ಇವರು ಅರ್ಪಿಸಿಬಿಟ್ಟದ್ದರಿಂದ, ಬೇರೆ ಯಾವ ಯೋಚನೆಯೂ ಇಲ್ಲದೆ ಹತ್ತು ವರ್ಷ ದುಡಿಯಲು ಸಾಧ್ಯವಾಯಿತು. ಇದು ಇವರ ವಿಶಾಲ ಮನೋಭಾವವನ್ನೂ, ಕನ್ನಡದ ಮೇಲಿರುವ ಪ್ರೀತಿಯನ್ನೂ ತೋರಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರತಿವರ್ಷ 'ವಸಂತೋತ್ಸವ' ಎಂಬ ಹೆಸರಿನಲ್ಲಿ ಅನೇಕ ಸಾಹಿತ್ಯದ ಕಾರ್ಯಕ್ರಮಗಳು ನಡೆಯುತ್ತವೆ. ಅದನ್ನು ಮೊದಮೊದಲು ೧೯೩೪ ರಲ್ಲಿ ಪ್ರಾರಂಭಿಸಿದ ಕೀರ್ತಿ ಸಿ.ಕೆ. ವೆಂಕಟರಾಮಯ್ಯನವರದು. ೧೯೩೯ ರಲ್ಲಿ ಬೆಳಗಾವಿಯಲ್ಲಿ ನಡೆದ ಲೇಖಕರ ೨೪ನೆಯ ಸಾಹಿತ್ಯಗೋಷ್ಠಿಯ ಅಧ್ಯಕ್ಷರಾಗಿ ಇವರು ಚುನಾಯಿಸಲ್ಪಟ್ಟರು. ಅನಂತರ ಕನ್ನಡ ಸಾಹಿತ್ಯಪರಿಷತ್ತು ೧೯೪೭ ರಲ್ಲಿ ಹರಪನಹಳ್ಳಿಯಲ್ಲಿ ಏರ್ಪಡಿಸಿದ್ದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಒಂದು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗುವುದೆಂದರೆ ಅದೊಂದು

ದೊಡ್ಡ ಗೌರವ. ಇಂತಹ ದೊಡ್ಡ ಸ್ಥಾನದಲ್ಲಿ ಕುಳಿತು ಬಹಳ ವಿನಯದಿಂದ ಅವರು ಅಧ್ಯಕ್ಷಭಾಷಣ ಮಾಡಿದರು.

"ಜೀವನದ ಸಮಸ್ತ ಕಾರ್ಯರಂಗಗಳಲ್ಲಿಯೂ ಕನ್ನಡಕ್ಕೇ ಅಗ್ರಪೂಜೆ ಸಲ್ಲುವಂತಾಗಬೇಕು. ಕನ್ನಡವೆಂದರೆ ಕನ್ನಡಿಗರ ಹೃದಯಗಳು ಭಕ್ತಿಯಿಂದ ಅರಳಬೇಕು. ಇದನ್ನು ಸಾಧಿಸುವವರೆಗೂ ಕನ್ನಡಿಗರು ಅವಿಶ್ರಾಂತರಾಗಿ ಶ್ರಮಿಸಬೇಕು. ಗಡಿನಾಡುಗಳಲ್ಲಿ ಇತರರಿಂದ ಕನ್ನಡಕ್ಕೆ ಅನ್ಯಾಯವಾಗದಂತೆ ಅಗತ್ಯವಾಗಿ ನೋಡಿಕೊಳ್ಳಬೇಕು. ಅದಕ್ಕಾಗಿ ಅವಶ್ಯ ಕಂಡಷ್ಟು ಪ್ರಚಾರ ಕಾರ್ಯವೂ ಇತರ ಪ್ರಯತ್ನಗಳೂ ನಡೆಯಬೇಕು"

ಎಂದು ಅವರು ಭಾಷಣದಲ್ಲಿ ಹೇಳಿದರು. ಸುಮಾರು ಅರವತ್ತಮೂರು ಪುಟಗಳಷ್ಟು ಇದ್ದ ದೀರ್ಘ ಭಾಷಣದಲ್ಲಿ ಅವರು ಕನ್ನಡದಲ್ಲಿ ಆಗಿದ್ದ, ಆಗಬೇಕಾಗಿದ್ದ ಕೆಲಸಗಳನ್ನು ವಿವರಿಸಿದರು. ಕೊನೆಗೆ ಭಾಷಣ ಮುಗಿಸುತ್ತ,

ಕನ್ನಡ ಬಂಧುಗಳೇ! ಹೇಳಿ, ಒಕ್ಕೊರಲಿನಿಂದ ಹೇಳಿ ಬಾ ತಾಯೆ ಬಾರಮ್ಮ! ನಮ್ಮ ನಾಲಗೆಯ ನಡೆಮುಡಿಯನ್ನು ಹಾಸುವೆವು. ಬಾ ತಾಯೆ! ನಮ್ಮ ದೇಹದೇವಾಲಯಕ್ಕೆ ಬಿಜಯಮಾಡು, ತಾಯೆ! ನಮ್ಮ ಹೃದಯ ಸಿಂಹಾಸನದಲ್ಲಿ ಮಂಡಿಸಿ ಉದ್ಧರಿಸು ತಾಯೆ! ನಾವು ಅನನ್ಯ ಶರಣರಾಗಿ ನಿನ್ನ ಆರಾಧನೆಯಿಂದ ಧನ್ಯರಾಗುವಂತೆ ಕರುಣಿಸಿ ಕೃಪೆ ಮಾಡು, ತಾಯೆ!"

ಎಂದು ಕನ್ನಡ ತಾಯಿಯ–ನುಡಿಯ ಸೇವೆಗೆ ನಿಲ್ಲುವಂತೆ ಘೋಷಿಸಿದರು.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ನಮ್ಮದೇ

ಆದ ಒಂದು ಸಂವಿಧಾನ (Constitution) ತಯಾರಾಯಿತು. ಸಂವಿಧಾನವೆಂದರೆ ಸರ್ಕಾರದ ಆಡಳಿತದ ರಚನೆ. ಈ ಸಂವಿಧಾನದ ಚೌಕಟ್ಟಿನಲ್ಲೇ ಭಾರತ ಸರ್ಕಾರ ಆಡಳಿತವನ್ನು ನಡೆಸುತ್ತದೆ. ಈ ಸಂವಿಧಾನ ಮೊದಲು ಇಂಗ್ಲಿಷಿನಲ್ಲಿ ರಚಿತವಾಯಿತು. ಅನಂತರ ದೇಶದ ಎಲ್ಲ ಭಾಷೆಗಳಿಗೂ ಅನುವಾದವಾಯಿತು. ಈ ಸಂವಿಧಾನವನ್ನು ಅನುವಾದ ಮಾಡಿದವರು ಸಿ.ಕೆ. ವೆಂಕಟರಾಮಯ್ಯನವರು.

## ಸಾಹಿತ್ಯ-ಸಂಸ್ಕೃತಿ ಅಭಿವೃದ್ಧಿ ಕೆಲಸ

ಮೂವತ್ತು ವರ್ಷಗಳು ವಿಶ್ರಾಂತಿಯಿಲ್ಲದೆ ಸರ್ಕಾರದ ಕೆಲಸವನ್ನು ತೃಪ್ತಿಕರವಾಗಿ ಮಾಡಿ ಅವರು ನಿವೃತ್ತರಾದರು. ಆ ವೇಳೆಗೆ ಅವರು ಅಸಾಧ್ಯವಾಗಿ ದುಡಿದಿದ್ದರು. ಅವರ ಮೈ, ಮನಸ್ಸು ಶಾಂತಿ ಬಯಸುವ ಕಾಲ ಅದು. ಆದರೆ ವೆಂಕಟರಾಮಯ್ಯನವರು ಸುಮ್ಮನೆ ಕೂಡಲಿಲ್ಲ. ಆಗ ಮೈಸೂರು ಮುಖ್ಯಮಂತ್ರಿಗಳಾಗಿದ್ದ ಕೆ. ಹನುಮಂತಯ್ಯನವರು ಕನ್ನಡ ಭಾಷೆ-ಸಂಸ್ಕೃತಿಯ ಬೆಳವಣಿಗೆಗಾಗಿ ಬೇಕಾದಷ್ಟು ಕೆಲಸ ಮಾಡಿದರು. ಇದಕ್ಕೆಂದೇ ಸರ್ಕಾರದಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯೊಂದನ್ನು ಪ್ರಾರಂಭಿಸಿ, ಸಿ. ಕೆ. ವೆಂಕಟರಾಮಯ್ಯನವರನ್ನು ಅದರ ನಿರ್ದೇಶಕ (Director) ರನ್ನಾಗಿ ನಿಯಮಿಸಿದರು. ವೆಂಕಟರಾಮಯ್ಯನವರು ಆ ವಯಸ್ಸಿನಲ್ಲೂ ಅತ್ಯಂತ ಉತ್ಸಾಹದಿಂದ ಈ ಕೆಲಸವನ್ನು ಒಪ್ಪಿಕೊಂಡರು. ತಮ್ಮ ಇಲಾಖೆಯ ಪೂರ್ತಿ ಉಪಯೋಗವನ್ನು ಮಾಡಿಕೊಂಡರು. ಕನ್ನಡ ನಾಡನ್ನೆಲ್ಲಾ ಸಂಚರಿಸಿ ಭಾಷಣ ಮಾಡಿ

ದರು. ಕನ್ನಡ ಸಾಹಿತ್ಯ–ಸಂಸ್ಕೃತಿಗಳನ್ನು ತಿಳಿಸಿಕೊಡುವ ಕಾರ್ಯಕ್ರಮಗಳನ್ನು ಕನ್ನಡ ನಾಡಿನಲ್ಲೆಲ್ಲಾ ನಡೆಸಿದರು. ಕನ್ನಡ ನಾಡಿನ ಗಮಕ ಕಲೆ, ನಾಟಕ, ಸಂಗೀತ ಸಾಹಿತ್ಯ ಗಳೆಲ್ಲಾ ಜನರಿಗೆ ತಿಳಿಯುವಂತೆ ಎಲ್ಲೆಲ್ಲೂ ಆ ಕಲೆಗಳಲ್ಲಿ ನಿಪುಣರಾದವರನ್ನು ಆರಿಸಿ ಕಳುಹಿಸಿಕೊಟ್ಟರು. ಪ್ರತಿ ಕಲಾವಿದರಿಗೂ ತಕ್ಕ ಗೌರವಧನ ನಿಗದಿಮಾಡಿ, ಸರ್ಕಾರ ದಿಂದ ಕೊಡಿಸಿದರು. ಇಷ್ಟೆಲ್ಲ ಆದರೂ ತಾವು ಸರ್ಕಾರದ ಉದ್ಯೋಗದಲ್ಲಿ ಇರುವವರೆವಿಗೂ, ತಮ್ಮ ಪ್ರವಾಸದ ಖರ್ಚನ್ನು ತೆಗೆದುಕೊಳ್ಳಲಿಲ್ಲ. ಆ ಖರ್ಚನ್ನು ತಾವೇ ವಹಿಸಿ ಕೊಳ್ಳುತ್ತಿದ್ದರು. ಎಂತಹ ದೊಡ್ಡ ವ್ಯಕ್ತಿ ಅಲ್ಲವೇ ?

ಸಿ. ಕೆ. ವೆಂಕಟರಾಮಯ್ಯನವರು ಸರ್ಕಾರದ ಉದ್ಯೋಗ ದಲ್ಲಿದ್ದವರು. ಪ್ರತಿ ತಿಂಗಳೂ ಸರ್ಕಾರದ ಸಂಬಳ ಪಡೆ ಯುತ್ತಿದ್ದವರು. ಆಗಿನ ಕಾಲದಲ್ಲಿ ಅವರು ಮನಸ್ಸು ಮಾಡಿದ್ದರೆ ಬೆಂಗಳೂರಿನಲ್ಲೊಂದು ಒಳ್ಳೆಯ ಸ್ವಂತ ಮನೆ ಕಟ್ಟಿಕೊಳ್ಳಬಹುದಾಗಿತ್ತು. ಆದರೆ ಅವರು ಅದನ್ನು ಇಷ್ಟ ಪಡಲಿಲ್ಲ. ಅವರಿಗೆ ಆಸ್ತಿಮಾಡಿಕೊಳ್ಳುವ ಯೋಚನೆಯೇ ಇರಲಿಲ್ಲ. ಅದೂ ಅಲ್ಲದೆ ಅವರಿಗೆ ತಮ್ಮ ಸಂಸಾರದ ಕಡೆ ಗಮನ ಕೊಡುವಷ್ಟು ಪುರಸೊತ್ತೂ ಇರಲಿಲ್ಲ. ಅವರಿಗೆ ಯಾವಾಗಲು ಕನ್ನಡದ್ದೇ ಯೋಚನೆ. ಕನ್ನಡದ ಬೆಳವಣಿ ಗೆಯ ಯೋಚನೆ. ಕನ್ನಡ ಸಾಹಿತ್ಯ ಪರಿಷತ್ತಿನ ಕೆಲಸಗಳಿ ಗಾಗಿ ಸ್ವಂತ ದೇಹಶ್ರಮವನ್ನು ಗಮನಿಸದೆ ದುಡಿದರು. ಅದರ ಕೆಲಸಗಳಿಗಾಗಿ ಹಣ ಸಂಗ್ರಹಿಸಲು ಊರೂರು ಸುತ್ತಿದರು. ಕನ್ನಡದ ಕೆಲಸವೆಂದರೆ ಅವರಿಗೆ ಸಂಸಾರ, ಆಸ್ತಿ, ಆರೋಗ್ಯ ಯಾವುದೂ ಬೇಕಾಗಿರಲಿಲ್ಲ. ಅವರಿಗೆ ಬರುತ್ತಿದ್ದ ಸಂಬಳ ಅವರ ಜೀವನಕ್ಕೆ ಮತ್ತು ಕನ್ನಡದ

ಕೆಲಸಗಳಿಗೆ ಖರ್ಚಾಗಿ ಹೋಗುತ್ತಿತ್ತು. ಬಡ ವಿದ್ಯಾರ್ಥಿಗಳು ಓದುವುದಕ್ಕೆ, ಅವರ ಊಟ-ತಿಂಡಿ-ವಸತಿಗಳಿಗೆ ಎಂದು ಬೇಕಾದಷ್ಟು ಹಣ ಖರ್ಚುಮಾಡುತ್ತಿದ್ದರು. ತಾವು ತುಂಬಾ ಬಡತನದಿಂದ ಮುಂದೆ ಬಂದದ್ದರಿಂದ ಅವರಿಗೆ ಅದರ ಕಷ್ಟ ಚೆನ್ನಾಗಿ ಗೊತ್ತಿತ್ತು. ಅವರು ತಮ್ಮ ಸರ್ವಸ್ವವನ್ನೂ ಕನ್ನಡದ ಕೆಲಸಕ್ಕಾಗಿ ವಿನಿಯೋಗಿಸಿದರು. ಹೀಗಾಗಿ ಅವರಿಗೆ ಬೆಂಗಳೂರಿನಲ್ಲಿ ಮನೆಕಟ್ಟಲು ಹಣವೇ ಉಳಿಯಲಿಲ್ಲ. ಆದ್ದರಿಂದ ಬೆಂಗಳೂರಿನಲ್ಲಿ ಇರುವವರೆವಿಗೂ ಅವರು ಬಾಡಿಗೆ ಮನೆಯಲ್ಲಿಯೇ ಇದ್ದರು.

ದಿನವೆಲ್ಲಾ ಬೇರೆ ಬೇರೆ ಕೆಲಸಗಳನ್ನು ಮಾಡುತ್ತಿದ್ದರಿಂದ, ರಾತ್ರಿಹೊತ್ತು ಬರೆಯಲು ಕುಳಿತುಕೊಳ್ಳುತ್ತಿದ್ದರು. ಒಂದೇ ಮನಸ್ಸಿನಿಂದ, ಯಾವ ತಡೆಯೂ ಇಲ್ಲದೆ ಅವರ ಬರವಣಿಗೆ ಸಾಗುತ್ತಿತ್ತು. ಏನು ಬರೆಯಬೇಕಾದರೂ ತುಂಬಾ ಓದುತ್ತಿದ್ದರು. ಒಂದು ಪುಸ್ತಕ ಬರೆಯಲಿಕ್ಕೆ ಮೂವತ್ತು-ನಲ್ವತ್ತು ಪುಸ್ತಕಗಳನ್ನು ಓದುತ್ತಿದ್ದರು. ರಾತ್ರಿಯೆಲ್ಲಾ ನಿದ್ದೆಗೆಟ್ಟು ಓದುತ್ತಿದ್ದರು. "ಸುಮ್ಮನೆ ಏನೋ ಯೋಚನೆ ಮಾಡಿ ಏನೋ ಬರೆದುಬಿಟ್ಟರೆ ಉಪಯೋಗವಿಲ್ಲ. ಆ ವಿಷಯವಾಗಿ ತುಂಬಾ ಓದಿ, ಚೆನ್ನಾಗಿ ಅರ್ಥಮಾಡಿಕೊಂಡು ಒಳ್ಳೆಯ ರಸಪಾಕ ಇಳಿಸಬೇಕು" ಎನ್ನುತ್ತಿದ್ದರು. ಯಾವ ಹೊಸ ವಿಷಯ ತಿಳಿದುಕೊಳ್ಳಬೇಕೆಂದೆನಿಸಿದರೂ ಅದರ ಮೂಲವನ್ನೇ ಓದುವ ಪ್ರಯತ್ನಪಡುತ್ತಿದ್ದರು. 'ತೆನಾಲಿ ರಾಮ' ಎಂಬ ತೆಲುಗು ಕವಿಯ ಚರಿತ್ರೆ ಬರೆಯಬೇಕು ಅನಿಸಿದಾಗ, ಹಗಲು ರಾತ್ರಿಯೆನ್ನದೆ ಕುಳಿತು ತೆಲುಗು ಕಲಿತು, ಆ ಪುಸ್ತಕವನ್ನು ಬರೆದರು.

'ತೆನಾಲಿ ರಾಮು'ನ ವಿಷಯವಾಗಿ ಕನ್ನಡದಲ್ಲಿ ಬರೆಯಲ್ಪಟ್ಟ ತುಂಬಾ ಒಳ್ಳೆಯ ಪುಸ್ತಕ ಇದು.

ತಾವು ಬರೆದ ಪುಸ್ತಕಗಳನ್ನೆಲ್ಲಾ ತಮ್ಮ ಸ್ವಂತ ಖರ್ಚಿನಲ್ಲಿ ಅವರೇ ಮುದ್ರಿಸಿ, ಪ್ರಕಟಿಸಿದರು. ಕನ್ನಡದ ಇನ್ನೊಬ್ಬ ಮಹನೀಯರಾದ ಶ್ರೀಮಾನ್ ನಿಟ್ಟೂರು ಶ್ರೀನಿವಾಸ ರಾಯರು ಬೆಂಗಳೂರಿನಲ್ಲಿ 'ಸತ್ಯಶೋಧನ ಪ್ರಕಟನ ಮಂದಿರ' ಎಂಬ ಸಂಸ್ಥೆಯನ್ನು ನಡೆಸುತ್ತಿದ್ದರು. ಸಿ. ಕೆ. ವೆಂಕಟರಾಮಯ್ಯನವರ ಪುಸ್ತಕಗಳನ್ನು ಈ ಸಂಸ್ಥೆ ಮಾರಾಟ ಮಾಡುತ್ತಿತ್ತು. ಕನ್ನಡದಲ್ಲಿ ಪುಸ್ತಕಗಳು ಮಾರಾಟವಾಗುತ್ತಿದ್ದುದು ಬಹಳ ಕಡಿಮೆ. ಆದ್ದರಿಂದ ಅತ್ಯುತ್ತಮ ಕೃತಿಗಳಾಗಿದ್ದರೂ ಇವರ ಪುಸ್ತಕಗಳು ಇವರಿಗೆ ಲಾಭ ತರಲಿಲ್ಲ.

ಸಿ. ಕೆ. ವೆಂಕಟರಾಮಯ್ಯನವರಿಗೆ ಚಿಕ್ಕಂದಿನಿಂದಲೂ ಸಂಗೀತದಮೇಲೆ ತುಂಬಾ ಆಸೆ. ಮಿಡ್ಲ್ ಸ್ಕೂಲಿನಲ್ಲಿರುವಾಗ ತಾವೇ ಒಬ್ಬ ಗುರುಗಳ ಹತ್ತಿರ ಸಂಗೀತ ಕಲಿಯಲು ಪ್ರಾರಂಭಿಸಿದ್ದರು. ಆದರೆ ಮುಂದುವರಿಸಲಾಗಲಿಲ್ಲ. ಮುಂದೆ ಓದು, ಮದುವೆ, ಸಂಸಾರ, ಮಕ್ಕಳು ಇವುಗಳ ನಡುವೆ ಅವರ ಆಸೆ ಪೂರೈಸಲಾಗಲಿಲ್ಲ. ಕೊನೆಗೆ ತಮ್ಮ ಹಿರಿಯ ಮಗನಿಗೆ ಸಂಗೀತ ಕಲಿಸಿ, ತಮ್ಮ ಸಂಗೀತದಾಸೆಯನ್ನು ತೀರಿಸಿಕೊಂಡರು. ಅವರ ಹಿರಿಯಮಗ ಸಿ. ವಿ. ನಾಗರಾಜ್ ಎಂಬುವವರು ಈಗ ಕನ್ನಡ ನಾಡಿನಲ್ಲಿ ಒಳ್ಳೆಯ ಸಂಗೀತ ವಿದ್ವಾಂಸರೆನಿಸಿದ್ದಾರೆ. ತಂದೆಗೆ ಬೇಕಾದಾಗಲೆಲ್ಲ ಮಗ ಮೈಮರೆತು ಹಾಡುತ್ತಿದ್ದರು. ಸಂಗೀತದ ಆಸೆ ವೆಂಕಟರಾಮಯ್ಯನವರನ್ನು ಸಂಗೀತಗಾರರ ಸ್ನೇಹ ಬೆಳೆಯಿಸುವಂತೆ ಮಾಡಿತು. ಮೈಸೂರಿನ ಪ್ರಸಿದ್ಧ ಸಂಗೀತ

ವಿದ್ವಾಂಸರುಗಳಾದ ಟಿ. ಚೌಡಯ್ಯ ಮತ್ತು ವಾಸುದೇವಾಚಾರ್ಯರು ಇವರ ಆತ್ಮೀಯರು, ಅಚ್ಚುಮೆಚ್ಚಿನವರು. ಈ ಸಂಗೀತದ ನಂಟನಿಂದಲೇ ಇವರು ಬೆಂಗಳೂರು ಗಾಯನ ಸಮಾಜದ ಸಮಿತಿಯಲ್ಲಿದ್ದರು. ಮೈಸೂರಿನ ಸಂಗೀತಗಾರರಿಗೆ ಅಲ್ಲಿ ಹಾಡುವ ಅವಕಾಶವನ್ನು ಕೊಡಿಸಿಕೊಟ್ಟರು.

## ನಿವೃತ್ತಿ - ಹಿರಿಯ ಬದುಕು

ಬೆಂಗಳೂರಿನಲ್ಲಿ ಇರುವವರೆವಿಗೆ ಸರ್ಕಾರದ ಕೆಲಸ ಬೇಕಾದಷ್ಟು ಮಾಡಿದರು. ಮುಖ್ಯ ಅನುವಾದಕರಾದ ಮೇಲೆ, ಸಾಹಿತ್ಯ–ಸಂಸ್ಕೃತಿ ಅಭಿವೃದ್ಧಿ ಡೈರೆಕ್ಟರ್. ಈ ಎಲ್ಲ ಕೆಲಸಗಳಿಂದ ನಿವೃತ್ತಿಹೊಂದಿದ ಕೂಡಲೇ ತಮ್ಮ ಸ್ವಂತ ಊರಾದ ಚನ್ನಪಟ್ಟಣಕ್ಕೆ ಬಂದುಬಿಟ್ಟರು. ಆ ವೇಳೆಗೆ ಅವರ ಇನ್‌ಷೂರೆನ್ಸ್ ಹಣ ಬಂದಿತ್ತು. ಜೊತೆಗೆ ಸ್ವಲ್ಪ ನೆಲ ಮಾರಿ ಹಣ ಸೇರಿಸಿದರು. ಈ ಹಣದಿಂದ ಚನ್ನಪಟ್ಟಣದಲ್ಲೊಂದು ಸುಂದರವಾದ ಮನೆಯನ್ನು ಕಟ್ಟಿಕೊಂಡರು. ದೊಡ್ಡ ಮನಸ್ಸಿನವರಾದ ಅವರು ಕಟ್ಟಿದ ಮನೆ ಹಿಂದಿನ ಕಾಲದ ಮನೆಗಳ ಹಾಗೆ ದೊಡ್ಡ ಮನೆ. ಮನೆಯ ಸುತ್ತಲೂ ಖಾಲಿ ಜಾಗ. ಹೂಗಿಡಗಳು. ಅವರಿಗೆ ನಾಲ್ಕು ಜನ ಮಕ್ಕಳು. ಒಬ್ಬಳು ಮಗಳು, ಮೂವರು ಗಂಡು ಮಕ್ಕಳು. ಮಗಳು ಕೆ. ವಿ. ರತ್ನಮ್ಮ ಎಂಬುವರು 'ಮೇಡಂ ಕ್ಯೂರಿ' ಎಂಬ ಇಂಗ್ಲಿಷ್ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಹಿರಿಯ ಮಗ ಸಂಗೀತ ವಿದ್ವಾಂಸರು. ಎರಡನೆಯವರು ಚನ್ನಪಟ್ಟಣದ 'ಸ್ಪನ್ ಸಿಲ್ಕ್ ಮಿಲ್'ನಲ್ಲಿ ಅಧಿಕಾರಿ. ಮೂರನೆಯವರು ಸಧ್ಯ ಅಮೆರಿಕದಲ್ಲಿದ್ದಾರೆ.



ಸಿ. ಕೆ. ವೆಂಕಟರಾಮಯ್ಯ ದಂಪತಿಗಳು



ಸಿ. ಕೆ. ವೆಂಕಟರಾಮಯ್ಯನವರು ನೆಹರೂ ಅವರೊಡನೆ



ಸಿ. ಕೆ. ವೆಂಕಟರಾಮಯ್ಯನವರು ವಿಜಯಲಕ್ಷ್ಮಿ ಪಂಡಿತ್ ಅವರೊಂದಿಗೆ



ಪಿ. ಕೆ. ವೆಂಕಟರಾಮಯ್ಯನವರು ರಾಜಾಜಿ, ಕೆಂಗಲ್ ಹನುಮಂತಯ್ಯ ಅವರೊಡನೆ




ಸಿ. ಕೆ. ವೆಂಕಟರಾಮಯ್ಯನವರು ಪ್ರೊ. ದೇ. ಜವರೇಗೌಡ, ಶ್ರೀ ಜಿ. ನಾರಾಯಣ ಅವರೊಡನೆ

ಸುಮಾರು ನಲವತ್ತು ವರ್ಷಗಳ ಕಾಲ ವಿಶ್ರಾಂತಿಯಿಲ್ಲದೆ ಸರ್ಕಾರದ ಕೆಲಸ, ಕನ್ನಡದ ಕೆಲಸ ಮಾಡಿದ್ದ ಅವರಿಗೆ ಚನ್ನಪಟ್ಟಣದಲ್ಲಿ ಶಾಂತಿ–ಸೌಖ್ಯಗಳು ದೊರಕಿದವು. ಓದುವ ಬರೆಯುವ ಕೆಲಸಗಳನ್ನು ಅವರು ಕಡಿಮೆ ಮಾಡಲಿಲ್ಲ. ಯಾರು ಎಲ್ಲಿ ಕರೆದರೂ ಸಂತೋಷದಿಂದ ಸಮಾರಂಭಗಳಿಗೆ ಹೋಗುತ್ತಿದ್ದರು. ಕೇಳುವವರಿಗೆ ತೃಪ್ತಿಯಾಗುವಂತೆ ಭಾಷಣ ಮಾಡುತ್ತಿದ್ದರು. ಚನ್ನಪಟ್ಟಣದಲ್ಲಿ 'ಗೋಖಲೆ ಸಾರ್ವಜನಿಕ ಸಂಸ್ಥೆ'ಯ ಶಾಖೆಯೊಂದನ್ನು ಸ್ಥಾಪಿಸಿದರು. ಹಿರಿಯ ಸಾಹಿತಿಗಳಾದ ಡಿ. ವಿ. ಗುಂಡಪ್ಪನವರು ಈ ಸಂಸ್ಥೆಯನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿದವರು. ಸಂಸ್ಥೆಯ ಉಪಾಧ್ಯಕ್ಷರಾಗಿ ಬೇಕಾದಷ್ಟು ಸಾರ್ವಜನಿಕ ಕಾರ್ಯಕ್ರಮಗಳನ್ನು ಚನ್ನಪಟ್ಟಣದಲ್ಲಿ ವೆಂಕಟರಾಮಯ್ಯನವರು ನಡೆಸಿದರು. ಕೇಂದ್ರ ಸರ್ಕಾರ ಇವರನ್ನು ಯು.ಜಿ.ಸಿ. (ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್) ಸದಸ್ಯರಾಗಿ ನಾಮಕರಣ ಮಾಡಿದಾಗ ಆಗಿಂದಾಗ್ಯೆ ದೆಹಲಿಗೆ ಹೋಗಿಬರುತ್ತಿದ್ದರು.

ಸಿ. ಕೆ. ವೆಂಕಟರಾಮಯ್ಯನವರು ಅತ್ಯಂತ ಸೌಜನ್ಯಶೀಲರು, ಧೀರವ್ಯಕ್ತಿ. ಎಲ್ಲದರಲ್ಲಿಯೂ ಒಳ್ಳೆಯದನ್ನೇ ಕಾಣುತ್ತಿದ್ದರು. ಮಕ್ಕಳನ್ನು ಕಂಡರೆ ಇವರಿಗೆ ತುಂಬಾ ಪ್ರೀತಿ. ಹಸುಮಗುವಿನಂತಹ ಗುಣದವರು. ಮಕ್ಕಳನ್ನು ಒಂದು ಸಲವಾದರೂ ಹೊಡೆದವರಲ್ಲ. ದೊಡ್ಡವರನ್ನು ಕಂಡರೆ ಎಷ್ಟು ಮರ್ಯಾದೆ ಕೊಡುತ್ತಿದ್ದರೋ, ಮಕ್ಕಳನ್ನು ಕಂಡರೂ ಅಷ್ಟೇ ಮರ್ಯಾದೆ, ವಿಶ್ವಾಸಗಳನ್ನು ತೋರಿಸುತ್ತಿದ್ದರು. ಹೆಂಡತಿಯು ಮಕ್ಕಳನ್ನು ಗದರಿಸಿದರೆ, ಮಕ್ಕಳ ಪರ ವಾದಿಸುತ್ತಿದ್ದರು. ಮಕ್ಕಳನ್ನೆಲ್ಲಾ ತಮ್ಮ

ಸುತ್ತಲೂ ಕೂಡಿಸಿಕೊಂಡು ಪುರಾಣದ ಕತೆಗಳನ್ನು ಹೇಳು ತ್ತಿದ್ದರು. ತಮ್ಮ ಕಾಲದಲ್ಲಿದ್ದ ಹಿರಿಯ ವ್ಯಕ್ತಿಗಳು, ಅವರ ದೊಡ್ಡ ಗುಣಗಳು, ಅವರು ಸತ್ಯ ಧರ್ಮ ಎನ್ನುತ್ತಾ ಹೇಗೆ ಬಾಳಿದರು ಎಂದೆಲ್ಲಾ ಸ್ವಾರಸ್ಯವಾಗಿ ಮಕ್ಕಳಿಗೆ ಹೇಳುತ್ತಿ ದ್ದರು. ಮಕ್ಕಳು ಹಿಂದಿನ ಧಾರ್ಮಿಕ ಮನೋಭಾವವನ್ನು ಬಿಡದೆ ದೈವಭಕ್ತರಾಗಿ ಬೆಳೆಯಬೇಕು ಎಂಬ ಅನಿಸಿಕೆ ಅವರದು. 'ಯಾವ ಕಿಟಕಿಯಿಂದ ಸೂರ್ಯನ ಕಿರಣ ಬಂದ ರೇನು, ಅದು ಕಿರಣವೇ ಅಲ್ಲವೆ', ಎನ್ನುತ್ತಿದ್ದ ಅವರು ಮಕ್ಕಳು ಎಲ್ಲ ಕಡೆಯಿಂದಲೂ ದೊರಕುವ ಒಳ್ಳೆಯ ಗುಣ ಗಳನ್ನು ಬೆಳೆಸಿಕೊಳ್ಳಬೇಕು ಎಂದು ಹೇಳುತ್ತಿದ್ದರು. ವೆಂಕ ಟರಾಮಯ್ಯನವರು ಮೊದಲಿನಿಂದಲೂ ತುಂಬಾ ಸಂಪ್ರ ದಾಯಸ್ಥರು. ಸತ್ಯ, ಧರ್ಮಗಳಿಗೆ ವ್ಯತಿರಿಕ್ತವಾಗಿ ನಡೆ ಯಲು ಹೆದರುತ್ತಿದ್ದರು. ತಮ್ಮ ಜೀವನ, ಉದ್ಯೋಗ, ಸಾರ್ವಜನಿಕ ಕೆಲಸ ಎಲ್ಲದರಲ್ಲೂ ಸಂಪ್ರದಾಯವನ್ನು ಬಿಟ್ಟು ನಡೆಯುತ್ತಿರಲಿಲ್ಲ. ಆದರೆ ಮೌಢ್ಯ ಗುಣಗಳನ್ನು ಬೆಳೆಸಿಕೊಳ್ಳಲಿಲ್ಲ. ಕಾಲಕ್ಕೆ ತಕ್ಕಂತೆ, ಸಂಪ್ರದಾಯವನ್ನು-ಬಿಟ್ಟುಕೊಡದೆ, ತಮ್ಮ ಬದುಕನ್ನೂ, ನಡವಳಿಕೆಯನ್ನೂ, ಅಳವಡಿಸಿಕೊಳ್ಳುತ್ತಿದ್ದರು. ಇದಕ್ಕೆ ಒಳ್ಳೆಯ ಉದಾಹರಣೆ ಯೆಂದರೆ, ಹರಿಜನರು ಮತ್ತು ಮುಸ್ಲಿಮರು ತಮ್ಮ ತಮ್ಮ ಸಮ್ಮೇಳನಗಳನ್ನು ಮಾಡಿದಾಗ ಸಿ. ಕೆ. ವೆಂಕಟರಾಮಯ್ಯ ನವರು ಆ ಜನರ ಆಹ್ವಾನವನ್ನು ಮನ್ನಿಸಿ ಅಲ್ಲಿ ಮುಖ್ಯ ಅತಿಥಿಗಳಾಗಿದ್ದುದು.

ಸಿ. ಕೆ. ವೆಂಕಟರಾಮಯ್ಯನವರಿಗೆ ಅಸಾಧಾರಣವಾದ ಸಂಸ್ಕೃತ ಭಾಷಾ ಪಾಂಡಿತ್ಯವಿತ್ತು. ಸಂಸ್ಕೃತದ ಮೇಲೆ ತುಂಬಾ ಮೋಹ. ಭಾಷಣ ಮಾಡುವಾಗಲೆಲ್ಲ ಸಂಸ್ಕೃತ

ಶ್ಲೋಕಗಳನ್ನು ಉದಹರಿಸಿ ವಿವರಿಸುತ್ತಿದ್ದರು. 'ನಮ್ಮ ದೇಶಕ್ಕೆ ಸಂಸ್ಕೃತ ಇಲ್ಲದಿದ್ದರೆ ಆಗುವುದಿಲ್ಲ' ಎನ್ನುತ್ತಿದ್ದರು. ಕಾಳಿದಾಸ ಮಹಾಕವಿಯನ್ನೂ ಅವನ ಕೃತಿಗಳನ್ನೂ ಕಂಡರೆ ಪ್ರಾಣ ಇವರಿಗೆ. ಆದ್ದರಿಂದಲೇ ಕಾಳಿದಾಸನ ವಿಷಯವಾಗಿ ಅನೇಕ ಪುಸ್ತಕಗಳನ್ನು ಬರೆದರು. ಕನ್ನಡದಲ್ಲಿ ಕಾಳಿದಾಸನ ಬಗೆಗೆ ವ್ಯಾಪಕವಾದ ಕನ್ನಡ ಗ್ರಂಥಗಳನ್ನು ಬರೆದವರು ಇವರು. 'ಕುಮಾರ ಸಂಭವ' ಸಂಸ್ಕೃತದಲ್ಲಿ ಇವರಿಗೆ ತುಂಬಾ ಇಷ್ಟವಾದ ಕೃತಿ. ಆದರಲ್ಲಿ ಬರುವ 'ಉಮಾ' ಪಾತ್ರ ಅತ್ಯಂತ ಪ್ರೀತಿಪಾತ್ರವಾದದ್ದು. ಆ ಪ್ರೀತಿಯಿಂದಲೇ ಮೊಮ್ಮಗಳಿಗೆ ಉಮಾ ಎಂದು ಹೆಸರಿಟ್ಟರು. ಸಾಹಿತಿಗಳು ಕೆಲವರು ಒಂದು ಕಡೆ ಸೇರಿದಾಗ ಕನ್ನಡದ ಪ್ರಸಿದ್ಧ ಸಾಹಿತಿಗಳಾದ ಬಿ. ಎಂ. ಶ್ರೀ ಇವರನ್ನು 'ಓ, ಸಂಸ್ಕೃತ ಪ್ರಿಯರು ಬಂದರು' ಎನ್ನುತ್ತಿದ್ದರು.

ವೆಂಕಟರಾಮಯ್ಯನವರು ಬೇಕಾದಷ್ಟು ಒಳ್ಳೆಯ ಕತೆಗಳನ್ನು ಬರೆದಿದ್ದಾರೆ. ಅವುಗಳಲ್ಲಿ, 'ನೀನೇ ಮುದ್ದು ಕೃಷ್ಣ....' ಎಂಬ ಒಂದು ಹೃದಯ ಕರಗಿಸುವ ಕತೆ ಇದೆ. ಇದು ಇವರ ತುಂಬಾ ಪ್ರಸಿದ್ಧ ಕತೆ. ಈ ಕತೆಯನ್ನು ಇವರು ೧೯೨೫ರಲ್ಲೇ ಬರೆದಿದ್ದರು. ಇದು ಒಂದು ಸಣ್ಣ ಸಂಸಾರದ ಕತೆ. ಮನೆಯಲ್ಲಿ ಇಬ್ಬರು ಮಕ್ಕಳು. ಹಿರಿಯ ಮಗ ಓದಿನಲ್ಲಿ ಜಾಣನಲ್ಲ. ಆದರೆ ಚೆನ್ನಾಗಿ ಚಿತ್ರಗಳನ್ನು ಬರೆಯುತ್ತಿದ್ದ. ಚಿಕ್ಕವನು ಓದಿನಲ್ಲಿ ತುಂಬಾ ಬುದ್ಧಿವಂತ. ತಂದೆಗೆ ಚಿಕ್ಕವನನ್ನು ಕಂಡರೆ ತುಂಬಾ ಪ್ರೀತಿ. ಹಿರಿಯವನನ್ನು ಕಂಡರೆ ಕೋಪ. ಒಂದು ಸಲ ಮನೆಯಲ್ಲಿ ನೂರು ರೂಪಾಯಿಯ ನೋಟು ಕಳೆದುಹೋಗುತ್ತದೆ. ದೊಡ್ಡವನೇ ತೆಗೆದುಕೊಂಡಿರಬೇಕು ಎಂದು ತಂದೆ ಅವನನ್ನು

ಬಯ್ದು, ಹೊಡೆದು ಹೀಯಾಳಿಸುತ್ತಾರೆ. ಅವನು ಬೇಜಾರು ಪಟ್ಟುಕೊಂಡು ಮನೆಬಿಟ್ಟು ಹೊರಟು ಹೋಗುತ್ತಾನೆ. ವಾಪಸ್ಸು ಬರುವುದೇ ಇಲ್ಲ. ಸ್ವಲ್ಪ ದಿನಗಳಾದ ಮೇಲೆ ತಂದೆ ಪಂಚಾಂಗ ತೆಗೆದಾಗ ಅದರಲ್ಲಿ ಆ ನೂರು ರೂಪಾಯಿಯ ನೋಟು ಇರುತ್ತದೆ. ಎಲ್ಲರಿಗೂ ದುಃಖವಾಗುತ್ತದೆ. ಕೆಲವು ವರ್ಷಗಳಾದ ಮೇಲೆ ತಂದೆ ನೆಂಟರೊಬ್ಬರ ಮನೆಯಲ್ಲಿ ಮುದ್ದುಕೃಷ್ಣನ ಚಿತ್ರವೊಂದನ್ನು ನೋಡುತ್ತಾರೆ. ಆ ಚಿತ್ರದಲ್ಲಿ ಪುಟ್ಟ ಕೃಷ್ಣ ಕಳ್ಳತನದಿಂದ ಮೊಸರು ತಿನ್ನುತ್ತಿದ್ದಾನೆ. ಗೋಪಿಕಾಸ್ತ್ರೀ ಅವನನ್ನು ದುರುಗುಟ್ಟಿ ನೋಡುತ್ತಿದ್ದಾಳೆ. ಪಕ್ಕದಲ್ಲಿ ದೀಪ. ದೀಪದ ಬೆಳಕು ಕೃಷ್ಣನಮೇಲೆ ಬಿದ್ದಿದೆ. ಹೊಟ್ಟೆಯ ಮೇಲೆ ಮೊಸರು ಹರಿಯುತ್ತಿದೆ. 'ಕಳ್ಳತನದಿಂದ ಸಿಕ್ಕಿಬಿದ್ದೆನಲ್ಲ' ಎಂಬ ಮುಖಭಾವ. 'ಬೇಗ ತಿಂದು ಬಿಡೋಣ' ಎಂಬ ಆತುರ. ತಂದೆ ಆಸೆಪಟ್ಟು ಆ ಚಿತ್ರವನ್ನು ಮನೆಗೆ ತರುತ್ತಾರೆ. ಸ್ವಲ್ಪ ದಿನಗಳಾದ ಮೇಲೆ ಸ್ನೇಹಿತರೊಬ್ಬರು, ಆ ಚಿತ್ರ ಬರೆದಿದ್ದ ಕಲಾವಿದನನ್ನು ಇವರ ಮನೆಗೆ ಕರೆತರುತ್ತಾರೆ. ಆ ಕಲಾವಿದನನ್ನು ನೋಡಿದ ತಂದೆ ಆಶ್ಚರ್ಯದಿಂದ ನಿಂತುಬಿಡುತ್ತಾರೆ. ಕಲಾವಿದ ಇವರ ಓಡಿಹೋಗಿದ್ದ ಹಿರಿಮಗ. "ನೀನೇ ಮುದ್ದುಕೃಷ್ಣ...." ಎಂದಷ್ಟೇ ಹೇಳಿ ಮುಂದೆ ದುಃಖದಿಂದ ಮಾತನಾಡಲಾಗದೆ ಅವರು ನಿಲ್ಲುತ್ತಾರೆ. "ನೀನೇ ಮುದ್ದುಕೃಷ್ಣನನ್ನು ಬರೆದವನು" ಎಂದು ಅವರಿಗೆ ಕೇಳಬೇಕೆನಿಸಿತ್ತು. ಎಲ್ಲರೂ ಸಂತೋಷಪಡುತ್ತಾರೆ. ಆದರೆ ಎಲ್ಲರ ಕಣ್ಣುಗಳಲ್ಲೂ ನೀರು ಬರುತ್ತದೆ.

ಸಿ. ಕೆ. ವೆಂಕಟರಾಮಯ್ಯನವರ ಬರವಣಿಗೆಯಲ್ಲೆಲ್ಲಾ ಈ ಆತ್ಮೀಯ ಭಾವ, ನಮ್ರತೆ, ಪ್ರಾಮಾಣಿಕತೆ ಇತ್ತು.

ಅವರು ಅನೇಕ ಮಹಾನುಭಾವರ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. "ಮಹಮ್ಮದ್ ಪೈಗಂಬರ್, ಬುದ್ಧ, ಏಬ್ರಹಾಂ ಲಿಂಕನ್, ಗುರುದೇವ, ಹರ್ಷವರ್ಧನ" ಮೊದಲಾದ ಕೃತಿಗಳನ್ನು ಬರೆದಿದ್ದಾರೆ. ಈ ಮಹಾನುಭಾವರೆಲ್ಲಾ ಇವರ ಆರಾಧ್ಯ ವ್ಯಕ್ತಿಗಳು. "ಈ ಕೃತಿಗಳು ನನ್ನ ವ್ಯಕ್ತಿಗತ ಅಭಿರುಚಿಯ ಸಂಕೇತವಾಗಿವೆ. ನನಗೆ ಉತ್ತಮ ಎನಿಸಿದು ದನ್ನು ಬರೆದಿದ್ದೇನೆ" ಎಂದವರು ಹೇಳಿಕೊಂಡಿದ್ದಾರೆ.

ಕನ್ನಡ ನಾಡು, ನುಡಿಗಳಿಗೆ ಇವರು ಮಾಡಿದ ಸೇವೆಗಾಗಿ ಮೈಸೂರು ಮಹಾರಾಜರು ಇವರಿಗೆ ೧೯೫೦ರಲ್ಲಿ "ರಾಜಸೇವಾಸಕ್ತ" ಎಂಬ ಬಿರುದು ಕೊಟ್ಟರು. ಜೀವನದಲ್ಲಿ ಇವರು ಗಳಿಸಿದ ಅನೇಕ ಸಾಧನೆಗಳಿಗಾಗಿ ೧೯೬೨ರಲ್ಲಿ ಇವರಿಗೆ ಆಗಿನ ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದರು "ಪದ್ಮಶ್ರೀ" ಗೌರವವನ್ನು ಕೊಟ್ಟು ಸನ್ಮಾನಿಸಿದರು.

ಸಿ. ಕೆ. ವೆಂಕಟರಾಮಯ್ಯನವರಿಗೆ ತಮ್ಮ ತಾಯಿಯವರನ್ನು ಕಂಡರೆ ತುಂಬಾ ಗೌರವವಿತ್ತು. ಸಂಸ್ಕೃತ ಕಲಿಸಿಕೊಟ್ಟ ಗುರುಗಳಾದ ನರಸಿಂಹಶಾಸ್ತ್ರಿಗಳು, ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದ ಟೇಟ್ ಸಾಹೇಬರು ಇವರುಗಳನ್ನು ಕಂಡರೆ ಬಹಳ ಮರ್ಯಾದೆ. ಪ್ರೀತಿಯ ಗುರುಗಳಾಗಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳನ್ನು ಕಂಡರೆ ಅತ್ಯಂತ ವಿಶ್ವಾಸ. ಅವರ ಕರ್ತವ್ಯನಿಷ್ಠೆ, ನಿಗರ್ವಿತನ, ಇವರಿಗೆ ಅಚ್ಚುಮೆಚ್ಚಾಗಿತ್ತು. ಗುರುಗಳೂ, ಮಾರ್ಗದರ್ಶಿಗಳೂ ಆದ ಬೆಳ್ಳಾವೆ ವೆಂಕಟನಾರಣಪ್ಪನವರಂತೂ ಇವರ ಆದರ್ಶ ವ್ಯಕ್ತಿ. ಅವರ ಎಲ್ಲ ಒಳ್ಳೆಯ ಗುಣಗಳನ್ನು ತಾವು ಅನುಸರಿಸಿದರು. ರಾಜಮನೆತನದವರನ್ನು ಕಂಡರೆ ಬಹಳ ಭಕ್ತಿ. ಆದರಿಂದಲೇ



ರಾಷ್ಟ್ರಪತಿ ಡಾ. ಬಾಬು ರಾಜೇಂದ್ರ ಪ್ರಸಾದ್ ಅವರಿಂದ ಪದ್ಮಶ್ರೀ ಪ್ರಶಸ್ತಿ ಪಡೆಯುತ್ತಿರುವುದು

'ಆಳಿದ ಮಹಾಸ್ವಾಮಿಯವರು' ಮತ್ತು 'ಶ್ರೀಮಧ್ವಯ್ಯವ ರಾಜರು' ಎಂಬೆರಡು ಪುಸ್ತಕಗಳನ್ನು ಬರೆದರು.

ಅವರ ಆರೋಗ್ಯ ಕ್ಷೀಣಿಸುತ್ತಿತ್ತು. ಜೀವನದಲ್ಲಿ ಅತಿಯಾಗಿ ದುಡಿದಿದ್ದರಿಂದ ಮತ್ತು ರಾತ್ರಿ ಬಹಳ ಹೊತ್ತು ಎಚ್ಚರವಿದ್ದು ಓದುಬರೆಹ ಮುಂದುವರಿಸುತ್ತಿದ್ದುದರಿಂದ ಅವರ ದೇಹ ಶಕ್ತಿ ಕುಗ್ಗಿತು. ಆದರೂ ಅವರು ಕನ್ನಡಕ್ಕೆ ಏನುಬೇಕಾದರೂ ಮಾಡಲು ಸಿದ್ಧರಾಗಿದ್ದರು. ಏನಾದರೂ ಬರೆದುಕೊಡಬೇಕೆಂದು ಯಾರು ಕೇಳಿದರೂ ಸರಿ, ಶ್ರಮವನ್ನೂ ಮರೆತು ಬರೆದುಕೊಡುತ್ತಿದ್ದರು. ಅದಕ್ಕಾಗಿ ತುಂಬಾ ಓದುತ್ತಿದ್ದರು. ಸಭೆ, ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು.

ಅವರಿಗೆ ಜೀವನದಲ್ಲಿ ತೃಪ್ತಿ ದೊರಕಿತ್ತು. ತಾನು ಹುಟ್ಟಿ ಜೀವನವನ್ನು ಸಾರ್ಥಕಮಾಡಿಕೊಂಡಿದ್ದೇನೆ ಅನ್ನಿಸಿತ್ತು. ಕೊನೆಕೊನೆಗೆ ಅವರು 'ಭವಭೂತಿ' ಕವಿಯ ಮೇಲೆ ಒಂದು ಗ್ರಂಥವನ್ನು ಬರೆಯುತ್ತಿದ್ದರು. ಆ ವೇಳೆಗೆ ಪಾರ್ಶ್ವವಾಯು ಬಂದು ನಿಸ್ಸಹಾಯಕರನ್ನಾಗಿಸಿತ್ತು. 'ರಾಮಾಯಣದಲ್ಲಿ ಅನೇಕ ಒಳ್ಳೆಯ ಪಾತ್ರಗಳಿವೆ. ಅವುಗಳ ವಿಷಯವಾಗಿ ಯಾರೂ ಬರೆದಿಲ್ಲ. ನಾನು ಬರೆಯಬೇಕು' ಎಂಬ ಯೋಚನೆ ಅವರಿಗಿತ್ತು.

## "ಸಿರಿಗನ್ನಡಂಗೆಲ್ಗೆ"

ಇವರ ಕನ್ನಡ ಪ್ರೀತಿ ಎಷ್ಟಿತ್ತೆಂದರೆ, 'ಮುಖ್ಯ ಅನುವಾದಕ'ರಾಗಿ ಇವರು ಬೆಂಗಳೂರಿನಲ್ಲಿದ್ದಾಗ, ಸರ್ಕಾರದಲ್ಲಿ ಇದ್ದ ಹಿರಿಯ ಆಂಗ್ಲ ಅಧಿಕಾರಿಗಳೊಬ್ಬರು, 'ಅನುವಾದ

ಕನ ಕೆಲಸ ಬಿಟ್ಟು ಬಾ. ಮ್ಯಾಜಿಸ್ಟ್ರೇಟನನ್ನಾಗಿ ಮಾಡುತ್ತೇನೆ' ಎಂದವರು. ಅದನ್ನು ಒಪ್ಪಿಕೊಂಡಿದ್ದರೆ ಮುಖ್ಯ ನ್ಯಾಯಧೀಶ ರಾಗಿ (ಚೀಫ್ ಜಸ್ಟಿಸ್) ನಿವೃತ್ತರಾಗಬಹುದಾಗಿತ್ತು. ದೊಡ್ಡ ಸಂಬಳ, ದೊಡ್ಡ ಅಧಿಕಾರ, ಎಲ್ಲವನ್ನೂ ಅನುಭವಿಸಬಹುದಾಗಿತ್ತು. ಅದೂ ಅಲ್ಲದೆ ಆಗ ಇದ್ದ ವಕೀಲರುಗಳಲ್ಲಿ ಯಾರೂ ಎಂ.ಎ., ಎಲ್ಎಲ್.ಬಿ. ಓದಿರಲಿಲ್ಲ. ಆದರೆ ಇವರು ಈ ವೈಭವಕ್ಕೆ ಮರುಳಾಗಲಿಲ್ಲ. ಕನ್ನಡ ತಾಯಿಯ ಮಡಿಲು ಬಿಟ್ಟು ಇಳಿಯಲಿಲ್ಲ. ಕನ್ನಡವನ್ನೇ ನುಡಿಯುತ್ತಾ, ಕನ್ನಡ ಬಾವುಟವನ್ನು ವೀರಯೋಧನಂತೆ ಎತ್ತಿಹಿಡಿದರು. ಕನ್ನಡದಲ್ಲಿ ಉಸಿರಾಡಿ, ಕನ್ನಡದಲ್ಲಿ ಮೆರೆದಾಡಿ ಬಾಳಿದರು.

ಬೆಂಗಳೂರಿನಲ್ಲಿ ಇವರು 'ನಾಲ್ವರು ಮಿತ್ರರು' ಎಂಬ ಸಂಸ್ಥೆಯನ್ನು ಇನ್ನೂ ಮೂರು ಜನ ಸ್ನೇಹಿತರೊಂದಿಗೆ ಪ್ರಾರಂಭಿಸಿದರು. ನಾಲ್ಕು ಜನರೂ ತಿಂಗಳಿಗೆ ಐದೈದು ರೂಪಾಯಿ ಹಾಕುತ್ತಿದ್ದರು. ಈ ಹಣದಲ್ಲಿ ಕಿರಿಯ ಲೇಖಕರ ಆರಂಭದ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರು. ಪ್ರಕಟಿಸಿದ ಸಾವಿರ ಪ್ರತಿಗಳನ್ನೂ ಆ ಲೇಖಕರಿಗೇ ಕೊಟ್ಟು ಧನ್ಯರಾಗುತ್ತಿದ್ದರು. ಕುವೆಂಪುರವರ 'ಕೊಳಲು', ಪುತಿನ ಅವರ 'ಹಣತೆ' ಗೋರೂರು ರಾಮಸ್ವಾಮಿ ಅಯ್ಯಂಗಾರ್ಯರ 'ನಮ್ಮ ಊರಿನರಸಿಕರು', ಶಿವರಾಮ ಕಾರಂತರ 'ಮುಕ್ತದ್ವಾರ', ದೇವುಡು ನರಸಿಂಹಶಾಸ್ತ್ರಿಗಳ 'ವಿಚಾರಣೆ', ಇವೆಲ್ಲಾ ಇವರು ... ಗಳು. ಇದಕ್ಕಿಂತ ಕನ್ನಡ ... ?




... ಲೇಖಕ ಮಿತ್ರರು ಸೇರಿ '... ಡಿದ್ದರು. ಪ್ರತಿವಾರವೂ ಒ... ಯ ಮನೆಯಲ್ಲಿ ಕಾರ್ಯಕ್ರಮ. ಬೆಂಗಳೂರಿ

